# ಮಕ್ಕಳ ಹಕ್ಕುಗಳು, ಸಮಸ್ಯೆಗಳು ಮತ್ತು ಅಭಿವೃದ್ಧಿ :
# ಉಡುಪಿ ಜಿಲ್ಲೆಯ ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಎಂ.ಫಿಲ್ ಪದವಿಗಾಗಿ

(ಅಭಿವೃದ್ಧಿ ಅಧ್ಯಯನ)

ಸಾದರ ಪಡಿಸಿದ ಸಂಪ್ರಬಂಧ


ಸಂಶೋಧಕರು

ಪ್ರತಿಮಾ

ನೋಂದಣಿ ಸಂಖ್ಯೆ : KTSMDS/00624

ಮಾರ್ಗದರ್ಶಕರು

ಡಾ. ವೈ. ರವೀಂದ್ರನಾಥ್ ರಾವ್



ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು-೫೭೫೦೦೧

ಜುಲೈ ೨೦೧೩

# ಮಕ್ಕಳ ಹಕ್ಕುಗಳು, ಸಮಸ್ಯೆಗಳು ಮತ್ತು ಅಭಿವೃದ್ಧಿ : ಉಡುಪಿ ಜಿಲ್ಲೆಯ ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಎಂ.ಫಿಲ್ ಪದವಿಗಾಗಿ

(ಅಭಿವೃದ್ಧಿ ಅಧ್ಯಯನ)

ಸಾದರ ಪಡಿಸಿದ ಸಂಪ್ರಬಂಧ

ಸಂಶೋಧಕರು

ಪ್ರತಿಮಾ

ನೋಂದಣಿ ಸಂಖ್ಯೆ : **KTSMDS/00624**

ಮಾರ್ಗದರ್ಶಕರು

ಡಾ. ವೈ. ರವೀಂದ್ರನಾಥ್ ರಾವ್

ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು-೫೭೫೦೦೧

ಜುಲೈ ೨೦೧೩

# ಯೋಗ್ಯತಾ ಪತ್ರ

ಪ್ರತಿಮಾ ಅವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ **'ಮಕ್ಕಳ ಹಕ್ಕುಗಳು, ಸಮಸ್ಯೆಗಳು ಮತ್ತು ಅಭಿವೃದ್ಧಿ : ಉಡುಪಿ ಜಿಲ್ಲೆಯ ಒಂದು ಅಧ್ಯಯನ'** ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್ ಪದವಿ ಪ್ರಾಪ್ತಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಬೇಕೆಂದು ಸಿದ್ಧಪಡಿಸಿರುತ್ತಾರೆ. ಈ ಸಂಪ್ರಬಂಧವು ಸಂಶೋಧಕರ ಸ್ವಂತ ಪರಿಶ್ರಮ, ವಿಶ್ಲೇಷಣೆ, ಅಭಿಪ್ರಾಯ ಸಂಗ್ರಹ ಮತ್ತು ಸಂಶೋಧನೆಯ ಫಲ ಸ್ವರೂಪವಾಗಿದೆ. ಇವರು ಈ ಸಂಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇನ್ನಿತರ ಉದ್ದೇಶಗಳಿಗಾಗಲಿ ಬಳಸಿಕೊಂಡಿಲ್ಲ.

ಸ್ಥಳ: ಉಡುಪಿ

ಡಾ. ವೈ. ರವೀಂದ್ರನಾಥ್ ರಾವ್

ದಿನಾಂಕ:೧೫/೦೭/೨೦೧೩

ಸಂಶೋಧನಾ ಮಾರ್ಗದರ್ಶಕರು

Dr. Y. Ravindranath Rao
M. A., Ph. D.,
Prof & Head Dept. of Sociology
St. Mary's Syrian College
BRAHMAVAR - 576 213 (D. K.)

## ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಎಂ.ಫಿಲ್ ಪದವಿಗಾಗಿ ಸಾದರ ಪಡಿಸಿದ **'ಮಕ್ಕಳ ಹಕ್ಕುಗಳು, ಸಮಸ್ಯೆಗಳು ಮತ್ತು ಅಭಿವೃದ್ಧಿ : ಉಡುಪಿ ಜಿಲ್ಲೆಯ ಒಂದು ಅಧ್ಯಯನ'** ಎಂಬ ಈ ಸಂಪ್ರಬಂಧವು ನನ್ನ ಸ್ವತಂತ್ರ ಕೃತಿಯಾಗಿದ್ದು ವಿಶ್ಲೇಷಣೆ ಮತ್ತು ಅಧ್ಯಯನದ ಫಲಶ್ರುತಿಯಾಗಿದೆ. ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ ಡಾ. ವೈ. ರವೀಂದ್ರನಾಥ್ ರಾವ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ಸಂಪ್ರಬಂಧವನ್ನು ಬೇರಾವುದೇ ಪದವಿ, ಡಿಪ್ಲೋಮಾ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢೀಕರಿಸುತ್ತೇನೆ.

ಪ್ರತಿಮಾ

ಸಂಶೋಧಕರು

## ಕೃತಜ್ಞತೆಯ ನುಡಿಗಳು

**'ಮಕ್ಕಳ ಹಕ್ಕುಗಳು, ಸಮಸ್ಯೆಗಳು ಮತ್ತು ಅಭಿವೃದ್ಧಿ : ಉಡುಪಿ ಜಿಲ್ಲೆಯ ಒಂದು ಅಧ್ಯಯನ'** ಎಂಬ ವಿಷಯವನ್ನು ಆಯ್ದುಕೊಂಡು ಕ್ಷೇತ್ರಾಧ್ಯಯನವನ್ನು ಮಾಡಿ ವಾಸ್ತವಾಂಶವನ್ನು ಹೊರತರಲು ಪ್ರಯತ್ನಿಸಲಾಗಿದೆ. ಈ ಅಧ್ಯಯನಕ್ಕೆ ಸಂಪೂರ್ಣ ಮಾರ್ಗದರ್ಶನವು ಡಾ. ವೈ. ರವೀಂದ್ರನಾಥ್ ರಾವ್, ಮುಖ್ಯಸ್ಥರು, ಸಮಾಜಶಾಸ್ತ್ರ ವಿಭಾಗ, ಎಸ್. ಎಂ. ಎಸ್. ಕಾಲೇಜು, ಬ್ರಹ್ಮಾವರ, ಇವರಿಂದ ಲಭಿಸಿದೆ. ಅಧ್ಯಯನಕ್ಕೆ ಮಾರ್ಗದರ್ಶನ, ಪ್ರೋತ್ಸಾಹವನ್ನು ನೀಡಿ ಪ್ರಸ್ತುತ ಅಧ್ಯಯನವನ್ನು ಯಶಸ್ವಿಯಾಗಿ ಪೂರ್ಣಗೊಳಿಸಲು ಸಹಕರಿಸಿದ ಅವರಿಗೆ ನಾನು ಆಭಾರಿಯಾಗಿದ್ದೇನೆ.

ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ, ಮಂಗಳೂರು ಇದರ ನಿರ್ದೇಶಕರಾದ ಡಾ. ರತ್ನಾಕರ ಸದಾನಂದ ಹಾಗೂ ಸಂಯೋಜಕರಾದ ಡಾ.ಎ.ವಿ.ನಾವಡ ಇವರುಗಳು ಸೂಕ್ತ ಸಲಹೆಗಳನ್ನು ನೀಡಿ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟಿರುವುದಕ್ಕಾಗಿ ವಂದನೆಗಳನ್ನು ಸಲ್ಲಿಸುತ್ತೇನೆ.

ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಸಹಕಾರ ನೀಡಿರುವ ಶ್ರೀಮತಿ ಪ್ರಮೀಳಾ ಜೆ ವಾಜ್, ಶ್ರೀಮತಿ ಶೀಲಾ ನಾಯಕ್ ಇವರಿಗೆ ನಾನು ಆಭಾರಿಯಾಗಿದ್ದೇನೆ. ನನ್ನ ಅಧ್ಯಯನಕ್ಕೆ ಪೂರ್ಣ ಪ್ರಮಾಣದ ಬೆಂಬಲವಿತ್ತ ತಂದೆ, ತಾಯಿಗೆ ನಾನು ಚಿರರುಣಿ.

ಸಂಶೋಧನೆಗೆ ಅಗತ್ಯವಾದ ಗ್ರಂಥಗಳನ್ನು ವಿವಿಧ ಗ್ರಂಥಾಲಯದಿಂದ ಪಡೆದುಕೊಂಡಿರುತ್ತೇನೆ. ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಈ ಅಧ್ಯಯನಕ್ಕೆ ಸಹಕರಿಸಿದ ಪ್ರತಿಯೋರ್ವರಿಗೂ ನನ್ನ ನಮನಗಳು.

ಪ್ರತಿಮಾ

ಸಂಶೋಧಕರು

## ವಿಷಯ ಸೂಚಿ

# ಕೋಷ್ಟಕಗಳ ಪಟ್ಟಿ

## ರೇಖಾಚಿತ್ರಗಳ ಪಟ್ಟಿ



## ನಕ್ಷೆಯ ವಿವರ

# ಅಧ್ಯಾಯ ೧

## ಪೀಠಿಕೆ

ಮಕ್ಕಳು ನಮ್ಮ ನಡುವೆ ಇರುವ, ಓಡಾಡುವ ಚೇತನಗಳು ಎಂಬುವುದು ಒಂದು ವಾಸ್ತವ ವಿಚಾರವಾಗಿದೆ. ಮಕ್ಕಳು ನಮ್ಮ ಸಮುದಾಯಗಳ ಇಂದಿನ ಪ್ರಜೆಗಳು. ಮಕ್ಕಳೇ ನಮ್ಮ ಆಸ್ತಿ ಎಂಬುವುದೂ ಮತ್ತೊಂದು ವಿಚಾರವಾಗಿದೆ. ನೆಮ್ಮದಿ, ಸುಖ, ಸಂತೋಷ, ಕಲಿಯುವ ವಾತಾವರಣದಲ್ಲಿ ಮಕ್ಕಳು ಬೆಳೆದು ಬಂದರೆ ಆ ಮಕ್ಕಳಿರುವ ಸಮುದಾಯಕ್ಕೆ ಅರ್ಥಪೂರ್ಣ ಭವಿಷ್ಯ ಇರುತ್ತದೆ. ಹೀಗಾಗಿ, ಹುಟ್ಟುವ ಪ್ರತಿ ಮಗುವನ್ನು ಅಕ್ಕರೆಯಿಂದ, ಜಾಗರೂಕತೆಯಿಂದ ಬೆಳೆಸಿ, ಯಾವುದೇ ಮಗು ಅನಾಥರಾಗಂತೆ, ರೋಗರುಜಿನಗಳಿಗೆ ಬಲಿಯಾಗದಂತೆ, ಅಂಗವಿಕಲವಾಗದೆ, ಎಂತಹದೇ ಪ್ರಸಂಗದಲ್ಲಿ ಮಕ್ಕಳು ಯಾರದೇ, ಒತ್ತಡಕ್ಕೆ ಬೀಳದೇ, ಬದುಕಲು-ಜೀವನ ನಡೆಸಲು ಎಳೆ ವಯಸ್ಸಿನಲ್ಲೇ ದುಡಿಯದಂತೆ, ಮುರುಟಿ ಹೋದ, ಅರ್ಥವಿಲ್ಲದ, ಭವಿಷ್ಯವಿಲ್ಲದ, ಕನಸಿಲ್ಲದವರಾಗದಂತೆ ನೋಡಿಕೊಳ್ಳುವ ಜವಬ್ದಾರಿಯು ಪ್ರತಿ ಸಮುದಾಯದ್ದಾಗಿದೆ.

ಮಕ್ಕಳು ಬೆಳೆದು ಸಮುದಾಯ, ರಾಜ್ಯ, ದೇಶವನ್ನು ಮುನ್ನೆಡಸಲು ಸಹಾಯಕರಾಗಬೇಕು ಎಂಬುವುದು ಎಲ್ಲ ಸಮುದಾಯಗಳ ವಿಚಾರವಾಗಿದೆ. ಇಂತಹ ವಿಚಾರ ಅರ್ಥಪೂರ್ಣವಾಗಿ ಸಫಲ ಆಗಬೇಕಾದರೆ, ಆಯಾ ಸಮುದಾಯಗಳ ಮಕ್ಕಳು ತಮ್ಮ ಬಾಲ್ಯವನ್ನು ಸಂಪೂರ್ಣವಾಗಿ ಅನುಭವಿಸಬೇಕು. ಮಕ್ಕಳು ಬಾಲ್ಯವನ್ನು ಅನುಭವಿಸುವುದು ಅವರು ಯಾವುದೇ ಅಡೆತಡೆಯಿಲ್ಲದೆ ಆಟಪಾಟಗಳಲ್ಲಿ, ಶಿಕ್ಷಣ, ಓಡಾಟದಲ್ಲಿ ತೊಡಗಿದಾಗ ಹೊಟ್ಟೆ ತುಂಬಾ ಉಂಡು ತಿಂದು, ಉಟ್ಟು, ಉರುಳಿ, ಹೊರಳಿ, ಬದುಕಲು ಆದಾಗ ಮಾತ್ರ. ಯಾವ ಸಮುದಾಯಗಳ ಮಕ್ಕಳು ೧೮ ವರ್ಷಗಳ ತನಕ ಇಂತಹ ಬಾಲ್ಯ ಅನುಭವಿಸದೆ, ಬಾಲ್ಯದಲ್ಲೇ ದೊಡ್ಡವರಂತೆ ಬದುಕುವುದನ್ನು ಒತ್ತಡದಲ್ಲಿ ನಡೆಸಿದರೆ ಆ ಮಕ್ಕಳ, ಆ ಸಮುದಾಯಗಳ ಭವಿಷ್ಯ ಕತ್ತಲ ಕೂಪಕ್ಕೆ ತಳ್ಳಿದಂತಾಗುತ್ತದೆ.

ಇಂತಹ ಪರಿಸ್ಥಿತಿಗಳನ್ನು ಬದಲಿಸುವ ಉದ್ದೇಶದಿಂದ ಬೆಳೆದು ಬಂದ ವಿಚಾರ 'ಮಕ್ಕಳ ಹಕ್ಕುಗಳು', ೨೦ ನವೆಂಬರ್ ೧೯೮೯ರಂದು ವಿಶ್ವಸಂಸ್ಥೆಯ ಮುಂದಿಟ್ಟ ಈ ವಿಚಾರವನ್ನು ಎಲ್ಲ ರಾಷ್ಟ್ರಗಳು ಒಪ್ಪಿಕೊಂಡಿವೆ. (ಅಮೇರಿಕಾ ಸಂಯುಕ್ತ ಸಂಸ್ಥಾನ ಹಾಗೂ ಸೊಮಾಲಿಯಾ ದೇಶಗಳು ತಾತ್ತ್ವಿಕವಾಗಿ ಮಕ್ಕಳ ಹಕ್ಕುಗಳಿಗೆ ಇತ್ತೀಚಿಗೆ ಬದ್ಧವಾಗಿದೆ). ಮಕ್ಕಳ ಹಕ್ಕುಗಳಲ್ಲಿರುವ ಎಲ್ಲಾ ವಿಚಾರಗಳನ್ನು ಜಾರಿಗೊಳಿಸಲು ಕಷ್ಟ ಸಾಧ್ಯವೆಂದು ತಿಳಿದಿದ್ದರೂ ಭಾರತ ಸರಕಾರ ಈ ಒಡಂಬಡಿಕೆಗೆ ೧೧ ಡಿಸೆಂಬರ್ ೧೯೯೨ರಂದು ಸಹಿ ಹಾಕಿ ಒಪ್ಪಿಕೊಂಡಿದೆ.

*"ತೀರಾ ಅಗತ್ಯವಾದ ಮಕ್ಕಳ ಮೂಲ ಅವಶ್ಯಕತೆಗಳು, ಯಾವುದು ನ್ಯಾಯ ಸಮ್ಮತವಾಗಿ ಮಕ್ಕಳಿಗೆ ದೊರಕಲೇಬೇಕಾಗಿರುವುದೋ, ಯಾವುದನ್ನು ಯಾರೂ ಮಕ್ಕಳಿಗೆ ಸ್ವಾಭಾವಿಕವಾಗಿ, ನಿರಾಕರಿಸಬಾರದೋ, ಸಕಾರಣವಿಲ್ಲದೆ ತಡೆಹಿಡಿಯಬಾರದೋ, ಮತ್ತು ಯಾವುದನ್ನು ವಯಸ್ಕ ಸಮಾಜ ಮಕ್ಕಳಿಗೆ ನೀಡಬೇಕೋ, ರಕ್ಷಿಸಬೇಕೋ, ಅವಕಾಶ ಕೊಡಬೇಕೋ ಅವುಗಳೇ ಮಕ್ಕಳ ಹಕ್ಕುಗಳು".*

ಜಗತ್ತಿನ ಎಲ್ಲಾ ಮಕ್ಕಳಿಗೆ ವಿಶ್ವಸಂಸ್ಥೆಯು ನೀಡಿರುವ ಮಕ್ಕಳ ಹಕ್ಕುಗಳ ಒಡಂಬಡಿಕೆಯಲ್ಲಿ ಪ್ರಮುಖವಾಗಿ ನಾಲ್ಕು ಹಕ್ಕುಗಳ ಗುಂಪುಗಳಿವೆ.

೧. ***ಬದುಕುವ ಹಕ್ಕು:*** ಎಲ್ಲಾ ಮಕ್ಕಳಿಗೆ ಬದುಕುವ ಹಕ್ಕು ಇದೆ. ಮಗು ಹುಟ್ಟುವ ಮೊದಲೇ ತಾಯಿ ಆರೈಕೆ, ಬೇಕಾದ ಔಷಧೋಪಚಾರ, ತೊಂದರೆ ಇಲ್ಲದ ಹೆರಿಗೆ, ಬೆಳೆಯುತ್ತಿರುವ ಮಕ್ಕಳಿಗೆ ಆರೋಗ್ಯ ಸೇವೆ, ಪೌಷ್ಟಿಕ ಆಹಾರ, ಪರಿಶುದ್ಧ ಗಾಳಿ, ನೀರು, ವಾತಾವರಣ ಸೂಕ್ತವಾದ ಸೌಲಭ್ಯಗಳಿರುವ ಮನೆ, ಇತ್ಯಾದಿಗಳನ್ನು ಎಲ್ಲಾ ಮಕ್ಕಳಿಗೆ ದೊರಕಿಸುವುದು ಆಯಾ ಸಮುದಾಯಗಳ ಕರ್ತವ್ಯ.

೨. ***ರಕ್ಷಣೆಯ ಹಕ್ಕು:*** ಬದುಕುವ ಮಕ್ಕಳು ತೊಂದರೆ ತೊಡಕುಗಳಿಲ್ಲದೆ ಬೆಳೆಯಲು ಅವರು ರಕ್ಷಣೆಯ ಹಕ್ಕು ಹೊಂದಿರಲೇಬೇಕು. ಮಕ್ಕಳ ಮೇಲೆ ದೌರ್ಜನ್ಯ, ಹಿಂಸೆ, ಒತ್ತಡ ತಪ್ಪಿಸುವುದು ಇದರ ಉದ್ದೇಶ. ಮಕ್ಕಳಿಗೆ ಅವರ ಮನೆ ಅಥವಾ ಮನೆಯ ಹೊರಗೆ ಬದುಕಲು ರಕ್ಷಿತ ಸಮಾಜದ ಅವಶ್ಯಕತೆಯಿದೆ. ಇಲ್ಲಿನ ವಿಚಾರ ಯಾವುದೇ ಮಗು ಒತ್ತಡದಡಿ ದುಡಿಯ ಬಾರದು. ಜೀತದಲ್ಲಿ ಸಿಲುಕಬಾರದು. ಇಲ್ಲಿನ ವಿಚಾರ ಯಾವುದೇ ಮಗು ಒತ್ತಡದಡಿ ದುಡಿಯಬಾರದು. ಜೀತದಲ್ಲಿ ಸಿಲುಕಬಾರದು. ಲೈಂಗಿಕ ದೌರ್ಜನ್ಯ, ಮಾರಾಟ ಇತ್ಯಾದಿ ಕೃತ್ಯಗಳಿಗೆ ಬಲಿಪಶುಗಳಾಗದೆ ಮುಕ್ತವಾಗಿ ಬದುಕುವಂತಾಗಬೇಕು.

೩. ***ಅಭಿವೃದ್ಧಿ ಹೊಂದುವ ಹಕ್ಕು:*** ಒಂದು ಮಗು ಹುಟ್ಟಿ ಬೆಳೆದರೆ ಸಾಲದು. ಮಾನಸಿಕ ಮತ್ತು ವ್ಯಕ್ತಿತ್ವ ವಿಕಸನದ ಅವಶ್ಯಕತೆಯೂ ಸಹ ಮಕ್ಕಳಿಗಿದೆ. ಮಕ್ಕಳಿಗೆ ಅಭಿವೃದ್ಧಿ ಹೊಂದುವ ಹಕ್ಕು ಇದ್ದು ಆ ದಿಶೆಯಲ್ಲಿ ಶಿಕ್ಷಣದ ಹಕ್ಕಿನ ಜೊತೆಯಲ್ಲಿ ಎಲ್ಲ ಮಕ್ಕಳಿಗೂ ವಿಶ್ರಾಂತಿ, ಮನೋರಂಜನೆ ಹೊಂದಲು ಸೂಕ್ತ ವ್ಯವಸ್ಥೆಗಳನ್ನು ಸಮುದಾಯಗಳು ನಿರ್ಮಾಣ ಮಾಡುವ ಅಗತ್ಯತೆ ಇದೆ. ಸಾಮಾಜಿಕ ಭದ್ರತೆಯನ್ನು ಮಕ್ಕಳಿಗೆ ಖಾತರಿಗೊಳಿಸುವುದೂ ಸ್ಥಳೀಯ ಸಂಸ್ಥೆಗಳು ಹಾಗೂ ಸರಕಾರದ ಜವಬ್ದಾರಿಯಾಗಿದೆ.

೪. ***ಭಾಗವಹಿಸುವ ಹಕ್ಕು:*** ಮನೆ, ವಿದ್ಯಾರ್ಥಿ ನಿಲಯ, ಶಾಲೆ, ಮಕ್ಕಳ ನಿಲಯ, ಗ್ರಾಮಸಭೆ, ನ್ಯಾಯಾಲಯ, ಮತ್ತಿತರ ಕಡೆ ತಮ್ಮ ಬಗ್ಗೆ ನಿರ್ಧಾರ ಕೈಗೊಳ್ಳಲು, ತಮ್ಮ ಕುರಿತು ಆಗುವ ಚರ್ಚೆ, ಚಿಂತನೆಗಳಲ್ಲಿ ಅಭಿಪ್ರಾಯ ವ್ಯಕ್ತಪಡಿಸಲು, ಸಾಂಘಿಕ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಲು ಅವಕಾಶ ಮಕ್ಕಳಿಗೆ ಸಿಗಲೇಬೇಕು. ಇಂತಹದನ್ನು ಮಕ್ಕಳ ಭಾಗವಹಿಸುವ ಹಕ್ಕು ಎಂದು ಗುರುತಿಸಲಾಗಿದೆ.

ಈ ನಾಲ್ಕು ಹಕ್ಕುಗಳ ಗುಂಪುಗಳು ಕೇವಲ ಪುಸ್ತಕದಲ್ಲಿರುವ ಪದಗಳು, ಘೋಷಣೆಗಳಷ್ಟೇ ಆಗಬಾರದೆಂದು ಈ ಹಕ್ಕುಗಳನ್ನು ಮುಂದಿಟ್ಟ ವಿಶ್ವಸಂಸ್ಥೆಯ ವಿಚಾರವಾಗಿದೆ. ಸಮುದಾಯ, ಸ್ಥಳೀಯ ಸಂಸ್ಥೆಗಳು, ಸರಕಾರದ ಅಧಿಕಾರಿಗಳು, ಶಿಕ್ಷಕರು, ಸ್ವಯಂ ಸೇವಾ ಸಂಸ್ಥೆಗಳು, ಮಕ್ಕಳ ನಿಲಯಗಳನ್ನು ನಡೆಸುವವರು, ಪೋಷಕರು, ನ್ಯಾಯಲಯ, ಮಾಧ್ಯಮಗಳು, ರಾಷ್ಟ್ರೀಯ ಅಂತರಷ್ಟ್ರೀಯ ಸಂಸ್ಥೆಗಳು, ಮತ್ತಿತರು ಯಾವಾಗ, ಎಲ್ಲಿ, ಎಂತಹ ಧೋರಣೆಗಳನ್ನು ಮಕ್ಕಳನ್ನುದ್ದೇಶಿಸಿ ಇಟ್ಟುಕೊಳ್ಳಬೇಕು ಮತ್ತು ಯಾವ ಯಾವ ಕ್ರಮಗಳನ್ನು ಕೈಗೊಳ್ಳಬೇಕು ಎಂಬುವುದನ್ನು ನಿರ್ದೇಶಿಸುವ ನಿಟ್ಟಿನಲ್ಲಿ ಮಕ್ಕಳ ಹಕ್ಕುಗಳ ಒಂಡಂಬಡಿಕೆ ರಚನೆಯಾಗಿದೆ.

ಮಕ್ಕಳ ಹಕ್ಕುಗಳ ಒಂಡಂಬಡಿಕೆ ಈಗ ಒಂದು ಅಂತಾರಾಷ್ಟ್ರೀಯ ಕಾನೂನು. ಈ ಒಡಂಬಡಿಕೆಯನ್ನು ಒಪ್ಪುವ ಮೂಲಕ ಈ ಕಾನೂನಿನ ಅಡಿಯಲ್ಲಿ ಭಾರತ ಬಂದಿದೆ. ನಮ್ಮ ದೇಶದಲ್ಲಿ ಮಕ್ಕಳ ಹಕ್ಕುಗಳ ಜಾರಿ ಎಲ್ಲಿ, ಹೇಗೆ ನಡೆದಿದೆ, ಮಕ್ಕಳನ್ನು ನಾವು ಹೇಗೆ ನಡೆಸಿಕೊಳ್ಳುತ್ತಿದ್ದೇವೆ, ಮಕ್ಕಳ ದು:ಸ್ಥಿತಿ, ಹಕ್ಕುಗಳ ಉಲ್ಲಂಘನೆ ತಪ್ಪಿಸಿ ಮಕ್ಕಳ ಹಕ್ಕುಗಳನ್ನು ಎತ್ತಿಹಿಡಿಯುವ ಕಲಸಗಳು ಹೇಗೆ ಆಗುತ್ತಿವೆ ಎಂಬುವುದರ ಬಗ್ಗೆ ವಿಶ್ವಸಂಸ್ಥೆಗೆ ಭಾರತ ಸರಕಾರ ವರದಿಯನ್ನು ಕಾಲಕಾಲಕ್ಕೆ ನೀಡಬೇಕು. ಸರಕಾರವೇ ಅಲ್ಲದೆ ಮಕ್ಕಳು, ಸ್ವಯಂ ಸೇವಾ ಸಂಘಟನೆಗಳೂ ವಿಶ್ವಸಂಸ್ಥೆಗೆ ಇಂತಹ ವರದಿಗಳನ್ನು ಕಳುಹಿಸಬಹುದು. ಈ ವರದಿಯನ್ನು ಅಂತಾರಾಷ್ಟ್ರೀಯ ಸಮುದಾಯಗಳು ಗಂಭೀರವಾಗಿ ಪರಿಗಣಿಸುತ್ತದೆ. ಹೀಗಾಗಿ ಮಕ್ಕಳ ಸ್ಥಿತಿ ಏನಿದೆಯೋ ಅದನ್ನೆ ಸರಕಾರ ಮಾಧ್ಯಮಗಳು ಮತ್ತು ಸಂಘಟನೆಗಳು ನೇರವಾಗಿ ಪ್ರತಿಬಿಂಬಿಸುವ ಅಗತ್ಯವಿದೆ.

ರೋಗರುಜೀನಗಳಿಗೆ, ಅಂಗವಿಕಲತೆ, ಅಪಘಾತ, ಅಲ್ಲಲ್ಲಿ ಮಕ್ಕಳ ಮಾರಾಟದ, ಜೀತಕ್ಕೆ ಇಡುವ ಪ್ರಕರಣಗಳು, ಹೋಟೆಲ್, ಮನೆಗೆಲಸ, ಕೈಗಾರಿಕೆ, ಕಾಮುಕರಿಗೆ, ವ್ಯಾಪಾರಿ ಲೈಂಗಿಕ ಶೋಷಣೆಗೆ ಮಕ್ಕಳನ್ನು ದೂಡಲೆಂದು ಮಕ್ಕಳನ್ನು ಕದಿಯುವ, ಮಾರುವ ಮತ್ತು ಮಕ್ಕಳಿಗೆ ಆಮೀಷಗಳನ್ನೊಡ್ಡಿ ಹಾದಿ ತಪ್ಪಿಸುವುದನ್ನೆ ವೃತ್ತಿಯನ್ನಾಗಿ ಕೆಲಸ ಮಾಡಿಕೊಂಡಿರುವವರು ಇನ್ನೂ ಇರುವುದು ಅಪಾಯಕಾರಿಯಾಗಿದೆ. ಮಕ್ಕಳು ಎದುರಿಸುತ್ತಿರುವ ಸಮಸ್ಯೆಗಳ ಈ ಪಟ್ಟಿಯನ್ನು ಹೀಗೆಯೇ ಬೆಳೆಸಿಕೊಂಡು ಹೋಗಬಹುದು. ಈ ಹಂತದಲ್ಲಿ ನಮ್ಮಲ್ಲೊಂದು ಪ್ರಶ್ನೆ ಏಳಬಹುದು. ಮಕ್ಕಳ ಮೇಲೆ ಹೀಗೆ ಅವ್ಯಾಹತವಾಗಿ ಆಗುತ್ತಿರುವ ಧಾಳಿಯನ್ನು ತಡೆಯಲು ಸ್ಥಳೀಯವಾಗಿ, ಜಿಲ್ಲಾ, ರಾಜ್ಯ ಹಾಗೂ ರಾಷ್ಟ್ರ ಮಟ್ಟದಲ್ಲಿ ಕಾನೂನು, ನೀತಿ ನಿಯಮಗಳು ಇಲ್ಲವೇ? ಪರಿಸ್ಥಿತಿಯನ್ನು ಉತ್ತಮಪಡಿಸಲು ಯೋಜನೆಗಳು ಇಲ್ಲವೇ?

ಭಾರತ ಸಂವಿಧಾನ 'ಬಾಲಕಾರ್ಮಿಕ ಪದ್ಧತಿ (ನಿಷೇಧ ಮತ್ತು ನಿಯಂತ್ರಣ) ಕಾಯಿದೆ ೧೯೮೬, ಮಕ್ಕಳ ನ್ಯಾಯ ಕಾಯಿದೆ ೨೦೦೦ ಹಾಗೂ ಮಕ್ಕಳ ಹಕ್ಕುಗಳ ರಕ್ಷಣ ಆಯೋಗಗಳ ಕಾಯಿದೆ ೨೦೦೫, ಇತ್ಯಾದಿ ಎಲ್ಲವೂ ಖಂಡಿತವಾಗಿಯೂ ಇದೆ. ಈ ಎಲ್ಲವೂ ಸ್ಪಷ್ಟವಾಗಿ ಹೇಳುವುದು ಯಾವುದೇ ಮಗುವನ್ನು ಸಂಕಷ್ಟಕ್ಕೆ ದೂಡಬಾರದು. ಹಾಗೆನಾದರೂ ಮಕ್ಕಳಿಗೆ ಹಿಂಸೆ ಕೊಡುತ್ತಿದ್ದರೆ ಅವರ ವಿರುದ್ಧ ಮೊಕದ್ದಮೆ ಹೂಡಿ ಶಿಕ್ಷೆ ಕೊಡುವುದರ ಬಗ್ಗೆ ಈ ಎಲ್ಲವು ನಿರ್ದೇಶನಗಳನ್ನು ನೀಡುತ್ತವೆ.

ಭಾರತದ ಮಕ್ಕಳಿಗೆ 'ಶಿಕ್ಷಣದ ಹಕ್ಕು' ಸಂವಿಧಾನ ಬದ್ಧವಾಗಿದೆ(ವಿಧಿ ೨೧ಎ). ಈ ಹಕ್ಕುಗಳನ್ನು ಅರ್ಥಪೂರ್ಣವಾಗಿ ಜಾರಿಗೊಳಿಸುವುದು, ಖಾತರಿಗೊಳಿಸುವುದು ಸರ್ಕಾರದ, ಅದರಲ್ಲೂ ಸ್ಥಳೀಯ ಸರ್ಕಾರಗಳ ಪ್ರಮುಖ ಕರ್ತವ್ಯ. ಮಕ್ಕಳಿಗೆ ಶಿಕ್ಷಣವನ್ನು ನಿರಾಕರಿಸುವಂತಹ ಕೆಲಸ ಯಾರೇ ಮಾಡುತ್ತಿರಲಿ ಅವರ ಮೇಲೆ ಕಾನೂನಿನಡಿಯಲ್ಲಿ ಕ್ರಮ ಕೈಗೊಳ್ಳಲೂ ಅವಕಾಶವಿದೆ. ಶಿಕ್ಷಣದ ಹಕ್ಕು ಇರುವಾಗ ಯಾವುದಾದರು ಮಗು ದಡಿಯಲು ಹೋದರೆ ಅದು ಮಗುವಿನ ಶಿಕ್ಷಣದ ಹಕ್ಕನ್ನು ಕಸಿದುಕೊಂಡಂತಾಗುತ್ತದೆ. ಮೂಲಭೂತ ಕರ್ತವ್ಯದಡಿ (ವಿಧಿ ೫೧ ಕೆ) ಮಕ್ಕಳನ್ನು ಶಿಕ್ಷಣದಲ್ಲಿ ತೊಡಗಿಸುವುದು ಪೋಷಕರ ಕರ್ತವ್ಯ ಎಂದು

ಸ್ಪಷ್ಟಪಡಿಸಲಾಗಿದೆ. ಮಕ್ಕಳಿಗೆ ಎಂತಹ ರಕ್ಷಣೆ ನೀಡಬೇಕೆಂದು ಹೇಳುವ ಸುಮಾರು ನೂರಕ್ಕೂ ಹೆಚ್ಚು ಕಾಯಿದೆಗಳು, ನೀತಿ ನಿಯಮಗಳು, ನ್ಯಾಯಾಲಯಗಳ ಪ್ರಮೂಖ ತೀರ್ಪುಗಳು ನಮ್ಮ ದೇಶದಲ್ಲಿದೆ.

ಇಂತಹ ಅನೇಕ ಮಕ್ಕಳ ಸ್ನೇಹಿ ವಿಚಾರಗಳನ್ನು ಒಳಗೊಂಡ ೫೪ ಪರಿಚ್ಛೇದಗಳನ್ನು ಹೊಂದಿರುವ ಮಕ್ಕಳ ಹಕ್ಕುಗಳ ಒಡಂಬಡಿಕೆ ನಮ್ಮೆಲ್ಲರ ಮೇಲೆ ಪರಿಣಾಮ ಬೀರುವ ಮೂಲಕ ಮಕ್ಕಳ ಬದುಕನ್ನು ಹಸನುಗೊಳಿಸುವ ನಿಟ್ಟಿನಲ್ಲಿ ಒಂದು ಮಹತ್ತರ ಕೊಡುಗೆಯಾಗಿದೆ. ಮಕ್ಕಳ ಹಕ್ಕುಗಳು ಜಾರಿಗೆ ಬಂದದ್ದು ೧೯೮೯ರಲ್ಲಿ. ಸಾಕಷ್ಟು ವರ್ಷಗಳು ಕಳೆದರೂ ಈ ಒಡಂಬಡಿಕೆಯ ಬಗ್ಗೆ ಸೂಕ್ತವಾದ ಪ್ರಚಾರ, ತರಬೇತಿ, ಮಾಹಿತಿ ಭಾರತದಲ್ಲಿ ನಡೆದಿಲ್ಲ. ಇಂತಹ ಕಾನೂನುಗಳ ನಿಜವಾದ ಪ್ರತಿಪಾದಕರು, ಮಕ್ಕಳ ಹಕ್ಕುಗಳನ್ನು ಜಾರಿ ಮಾಡಬಲ್ಲಂತಹ ಸಾಮರ್ಥ್ಯ ಇರುವ ಜನಪ್ರತಿನಿಧಿಗಳು, ಶಿಕ್ಷಕರು, ಸಾಮಾಜಿಕ ನಾಯಕರು ಮಕ್ಕಳ ಸ್ಥಿತಿಗತಿ, ಅವಶ್ಯಕತೆಗಳನ್ನು ಕುರಿತು ಬಹಿರಂಗವಾಗಿ ಮಾತನಾಡುವ ಸಮಯ ಈಗ ಎದುರಿಗಿದೆ. ಮಕ್ಕಳ ಹಕ್ಕುಗಳ ಬಗ್ಗೆ ಪೋಷಕರಷ್ಟೇ ಅಲ್ಲದೆ ಮಕ್ಕಳೂ ತಿಳಿಯಬೇಕಿದೆ. ಅಂತಹ ಪ್ರಕ್ರಿಯೆಗಳಿಗೆ ಗ್ರಾಮ, ನಗರ, ವಿದ್ಯಾರ್ಥಿ ನಿಲಯ, ಆಶ್ರಮ, ಮಕ್ಕಳ ನಿಲಯ, ಶಾಲಾ ಮಟ್ಟದಲ್ಲಿ ಒಲ್ಲೆಯ ಬೆಂಬಲ ಸಿಗಬೇಕಿದೆ.

ಮಕ್ಕಳ ಹಕ್ಕುಗಳ ಸಂಘಗಳಲ್ಲಿ, ಮೀನಾ ತಂಡಗಳಲ್ಲಿ, ಮಕ್ಕಳ ಹಕ್ಕುಗಳ ವಿಶೇಷ ಗ್ರಾಮ ಸಭೆಯಲ್ಲಿ ಮಕ್ಕಳ ಹಕ್ಕುಗಳ ಜಾರಿ ಕುರಿತು ಮಕ್ಕಳು ಅರ್ಥಪೂರ್ಣ ಚರ್ಚೆ ನಡೆಸಿ ಹಿರಿಯರೊಡನೆ ಸಮಾಲೋಚಿಸಬೇಕಿದೆ.

ಮಕ್ಕಳ ಹಕುಗಳ ಬಗ್ಗೆ ಮಕ್ಕಳು ತಿಳಿಯುವುದರೊಂದಿಗೆ ವಯಸ್ಕರ ಜವಾಬ್ದಾರಿ ಹೆಚ್ಚುತ್ತದೆ. ಹೀಗಾಗಿ ಎಲ್ಲ ವಯಸ್ಕರು ಮಕ್ಕಳ ಹಕ್ಕುಗಳ ವಿವರಗಳನ್ನು ತಿಳಿದುಕೊಳ್ಳುವ ಮತ್ತು ತಿಳಿದ ವಿವರಗಳನ್ನು ಇತರರಿಗೆ ತಿಳಿಸಿ ಪಸರಿಸುವ ಮತ್ತು ಮಕ್ಕಳ ಸ್ನೇಹಿ ಕೆಲಸಗಳು, ನಿಲುವುಗಳನ್ನು ಕೈಗೊಳ್ಳುವ ಮೂಲಕ ಮಕ್ಕಳಿಗೆ ಪೀತಿ ಮತ್ತು ರಕ್ಷಣೆ ಕೊಡುವ ದಿಶೆಯಲ್ಲಿ ವಯಸ್ಕರು, ತಮ್ಮನ್ನು ತೊಡಗಿಕೊಳ್ಳಬೇಕಿದೆ.

ಕರ್ನಾಟಕ ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಮಕ್ಕಳ ಪ್ರಮಾಣ ४೧%ರಷ್ಟು. ಆದರೆ ಮಕ್ಕಳಿಗಾಗಿ ಮೀಸಲಿಡುವ ಒಟ್ಟು ಹಣ ತೀರಾ ಕಡಿಮೆ. ಜೀವಂತವಾಗಿ ಹುಟ್ಟಿದ ಒಂದು ಸಾವಿರ ಮಕ್ಕಳಲ್ಲಿ ४೩ ಮಕ್ಕಳು ಒಂದು ವರ್ಷ ಪೂರೈಸುವುದರೊಂದಿಗೆ ಸಾವನಗನಪ್ಪುತ್ತಿದ್ದಾರೆ. ೦-೬ ವರ್ಷದೊಳಗಿನವರಲ್ಲಿ ಸಾವಿರ ಗಂಡು ಮಕ್ಕಳಿದ್ದರೆ, ಕೇವಲ ೯೫೨ ಹೆಣ್ಣು ಮಕ್ಕಳಿದ್ದಾರೆ. ಕಾರಣ ಹೆಣ್ಣು ಭ್ರೂಣ ಹತ್ಯೆ ಮತ್ತು ಶಿಶು ಹತ್ಯೆ. ಶೇ. ೨೩ರಷ್ಟು ಹೆಣ್ಣು ಮಕ್ಕಳಿಗೆ ೧೮ ವರ್ಷ ತುಂಬುವುದರೊಳಗೆ ಮದುವೆ, ಒಟ್ಟು ಹೆರಿಗೆಗಳಲ್ಲಿ ೨೦%ರಷ್ಟು ೧೫-೧೯ ವರ್ಷದವರಿಗಾಗುತ್ತಿದೆ. ರಕ್ತಹೀನತೆಯಿಂದ ಬಳಲುವ ಸ್ತ್ರೀಯರು, ಶಾಲೆಗೆ ಹೋಗದೇ ದುಡಿಯುವ ಮಕ್ಕಳು, ದೇವದಾಸಿ ಪದ್ಧತಿಯಂತಹ ಅನಿಷ್ಟ ಸಂಪ್ರದಾಯಗಳು, ಎಚ್.ಐ.ವಿ. ಸೋಂಕಿಗೆ ಬಲಿಯಾಗುವ ಮಕ್ಕಳ ಸಂಖ್ಯೆ ಹೆಚ್ಚುತ್ತಲೇ ಇದೆ.

ಉಡುಪಿ ಜಿಲ್ಲೆಯಲ್ಲಿನ ಪ್ರತಿಯೊಂದು ಗ್ರಾಮಗಳಲ್ಲಿಯೂ ಕೂಡ ಮಕ್ಕಳಿಗೆ ಎಚ್.ಐ.ವಿ. ಸೋಂಕಿನ ಪ್ರಮಾಣ ಇರುವುದು, ೧೮ಕ್ಕಿಂತ ಕೆಳಗಿನ ವಯಸ್ಸಿನಲ್ಲಿ ಮದುವೆ, ೧೫-೧೯ರ ವರ್ಷದೊಳಗಿನ ಹೆರಿಗೆ ಪ್ರಕರಣಗಳು, ರಕ್ತಹೀನತೆ, ಭ್ರೂಣ ಹತ್ಯೆ, ಶಿಶು ಮರಣ, ರೋಗ ರುಜೀನಗಳು, ಅಂಗವಿಕಲತೆ, ಅಪಘಾತದಿಂದ ಮರಣಗಳ

ಸಂಖ್ಯೆಗಳನ್ನು ಕಾಣಬಹುದು. ಇದಕ್ಕೆ ಉತ್ತಮ ನಿರ್ದಶನ ಇತ್ತೀಚೆಗೆ ಕಾರ್ಕಳದಲ್ಲಿ ನಡೆದ ಹೆಣ್ಣು ಶಿಶುವಿನ ಹತ್ಯೆ ಮಾಡಿ ಪಾರ್ಸೆಲ್ ಕಳುಹಿಸಿದ ಪ್ರಕರಣ. ಇಲ್ಲಿಯೂ ಕೂಡ ದಿನನಿತ್ಯ ರಸ್ತೆ ಬದಿಯಲ್ಲಿ ಭಿಕ್ಷೆ ಬೇಡುವ ಮಕ್ಕಳು, ಹೋಟೇಲ್, ಇತ್ಯಾದಿಗಳಲ್ಲೂ ದುಡಿಯುವ ಮಕ್ಕಳು, ಬೀದಿಯಲ್ಲಿ ವಾಸಿಸುವ ಮಕ್ಕಳು, ಮಕ್ಕಳ ಸಾಗಾಟ ಪ್ರಕರಣ, ಮಕ್ಕಳ ಕಳವು ಪ್ರಕರಣ, ಮುಂತಾದವುಗಳನ್ನು ನಾವು ನೋಡುತ್ತಾ ಇದ್ದೇವೆ.

ಈ ಸಮಸ್ಯೆಗಳು ಕೇವಲ ರಾಷ್ಟ್ರ, ರಾಜ್ಯ ಮಟ್ಟಕ್ಕೆ ಸೀಮಿತವಗಿರದೆಯೇ, ಪ್ರಸ್ತುತ ಉಡುಪಿ ಜಿಲ್ಲೆಯಲ್ಲಿನ ಪ್ರತಿ ಗ್ರಾಮಗಳಲ್ಲಿಯೂ ನೋಡುತ್ತಿದ್ದೇವೆ. ಆಯಾ ಗ್ರಾಮ ಪಂಚಾಯತ್ ಹಾಗೂ ಪ್ರಾಥಮಿಕ ಆರೋಗ್ಯ ಕೇಂದ್ರಗಳಿಂದ ದೊರೆತ ಮಾಹಿತಿ ಪ್ರಕಾರ ಎಚ್.ಐ.ವಿ ಬಾಧಿತ ಹಾಗೂ ಮರಣ ಹೊಂದಿದ ಮಕ್ಕಳು, ನವಜಾತ ಶಿಶುವಿನ ಮರಣ, ರಕ್ತಹೀನತೆ, ೧೮ಕ್ಕಿಂತ ಕಡಿಮೆ ವಯಸ್ಸಿನ ಮದುವೆ, ಹೆರಿಗೆಗಳ ಪ್ರಕರಣಗಳು, ಶಾಲೆಯನ್ನು ಬಿಟ್ಟ ಮಕ್ಕಳು, ಹೋಟೆಲ್, ಬಸ್ಸ್‌ಗಳಲ್ಲಿ, ಬೀದಿಯಲ್ಲಿ ಭಿಕ್ಷೆ ಬೇಡುವ ಮಕ್ಕಳನ್ನೂ ಇನ್ನೂ ಕಾಣುತ್ತಿದ್ದೇವೆ. ಈ ಎಲ್ಲಾ ಮಾಹಿತಿಗಳ ಹಿನ್ನಲೆಯಲ್ಲಿ ಮಕ್ಕಳ ಇಂತಹ ಸಮಸ್ಯೆಗಳಿಗೆ ಮಕ್ಕಳ ಹಕ್ಕುಗಳ ಪರಿಕಲ್ಪನೆಯು ಒಂದು ಆಶಾದಾಯಕ ವಿಚಾರವಾಗಿದೆ ಎಂಬ ತೀರ್ಮಾನಕ್ಕೆ ಬರಬಹುದು. ಈ ಪೂರ್ವ ತೀರ್ಮಾನವನ್ನು ಪರೀಕ್ಷಿಸಲು ಮಕ್ಕಳ ಹಕ್ಕುಗಳು ಮತ್ತು ಮಕ್ಕಳ ಅಭಿವೃದ್ಧಿಯ ನಡುವೆ ನೇರ ಸಂಬಂಧವಿದೆಯೆಂದು ವಿಶ್ಲೇಷಿಸಲು ಈ ಅಧ್ಯಯನದಲ್ಲಿ ಪ್ರಯತ್ನಿಸಲಾಗುವುದು.

**ಸಮಸ್ಯೀಕರಣ:**

ಮಕ್ಕಳ ಸರ್ವತೋಮುಖವಾದ ಅಭಿವೃದ್ಧಿಗೆ ಮಕ್ಕಳ ಹಕ್ಕುಗಳ ಪರಿಕಲ್ಪನೆಯು ಸಹಾಯಕವಾಗುತ್ತದೆ. ಈ ಪರಿಕಲ್ಪನೆ ನಿಜವಾಗಲು ಸಮುದಾಯ ಭಾಗವಹಿಸುವಿಕೆ ಬಹಳ ಅಗತ್ಯ. ಮಕ್ಕಳು ಅಭಿವೃದ್ಧಿ ಪಥದಲ್ಲಿ ಸಾಗಬೇಕಾರೆ ಮಕ್ಕಳ ಹಕ್ಕುಗಳನ್ನು ಕಾಪಾಡುವುದು ಅವಶ್ಯ. ಮಕ್ಕಳ ಅಭಿವೃದ್ಧಿ ಮಕ್ಕಳ ಹಕ್ಕುಗಳಿಂದ ಮಾತ್ರ ಸಾಧ್ಯ. ಮಕ್ಕಳ ಹಕ್ಕುಗಳ ಕ್ರಿಯಾತ್ಮಕ ಒಳಗೊಳ್ಳುವಿಕೆ ಖಾತ್ರಿಪಡಿಸಲು ಅಗತ್ಯ ಮಾರ್ಗೋಪಾಯ ಕಂಡುಹಿಡಿಯಲು ಇನ್ನೂ ಹೆಚ್ಚಿನ ಅಧ್ಯಯನಗಳ ಅಗತ್ಯವಿದೆ.

೧) ಎಷ್ಟು ಮಕ್ಕಳು ಹುಟ್ಟುವಾಗಲೇ ಅಥವಾ ಹುಟ್ಟಿದ ಮೇಲೆ ಒಂದು ವರ್ಷ ಪೂರೈಸುವುದರೊಳಗೆ ಮತ್ತು ಐದು ವರ್ಷ ದಾಟುವುದರೊಳಗೆ ಸತ್ತು ಹೋಗುತ್ತಿದ್ದಾರೆ? ಅವರು ಯಾವ ಯಾವ ತಡೆಗಟ್ಟಬಹುದಾದ ಕಾರಣಗಳಿಗೆ, ರೋಗ ರುಜೀನಗಳಿಗೆ ಬಲಿಯಾಗುತ್ತಿದ್ದಾರೆ?

೨) ಎಷ್ಟು ಮಕ್ಕಳು, ಯಾವ ಜಾತಿ, ಪಂಗಡ, ವರ್ಗದ, ಅದರಲ್ಲೂ ಹೆಣ್ಣು ಮಕ್ಕಳು ಶಾಲೆಯಿಂದ ಹೊರಗೆ ಉಳಿದಿದ್ದಾರೆ? ಅವರು ಶಾಲೆಯಿಂದ ಹಾಗೆ ಹೊರಗಿರಲು ಕಾರಣವೇನು?

೩) ಮಕ್ಕಳು ಅಂಗವಿಕಲತೆಯೊಂದಿಗೆ ಹುಟ್ಟಲು ಅಥವಾ ಅಪಘಾತ, ಅನಾರೋಗ್ಯ, ದುರಂತದಿಂದಾಗಿ ಅಂಗವಿಕಲರಾಗುವ ಪ್ರಕರಣಗಳು ಯಾಕೆ ಇನ್ನೂ ಹೆಚ್ಚು ಹೆಚ್ಚು ಆಗುತ್ತಿವೆ? ಅವರಿಗೆ ಸೂಕ್ತವಾದ ಸೇವಾ ಸೌಲಭ್ಯಗಳು, ಕೊಳೆಗೇರಿಗಳು ಮತ್ತು ಬಡವರೆ ಇರುವ ಪ್ರದೇಶಗಳಲ್ಲಿ ಏಕೆ ದೊರೆಯುತ್ತಿಲ್ಲ?

೪) ನಮ್ಮ ಸಮುದಾಯಗಳ ಇಷ್ಟೊಂದು ಮಕ್ಕಳು ದುಡಿಮೆಯಲ್ಲಿದ್ದಾರೆ, ಬಾಲಕಾರ್ಮಿಕರ ಗಂಪಿಗೆ ಸೇರಿದ್ದಾರೆ, ಕಾನುನು ನಿಷೇಧಿಸಿದ್ದರು ಕೂಡ ಮಕ್ಕಳಿಗೆ ಮದುವೆ ಮಾಡುತ್ತಾರೆ, ಎಚ್.ಐ.ವಿ ಸೋಂಕಿಗೆ ಬಲಿಯಾಗಿ, ಪೋಷಕರಿಂದ ದೂರಾಗಿ, ನೈಸರ್ಗಿಕ ವಿಕೋಪಗಳಿಗೆ ಬಲಿಯಾಗಿ ಅಥವಾ ತಮ್ಮ ಮೂಲ ನೆಲೆಗಳಿಂದ ಹೊರ ದೂಡಲ್ಪಟ್ಟು, ಮಕ್ಕಳು ಅನಾಥರಾಗುವ, ನಿರ್ಗತಿಕರಾಗುವ ಪ್ರಮಾಣ ದಿನೇ ದಿನೇ ಬೆಳೆಯುತ್ತಿದೆ. ಯಾಕೆ?

೫) ಅಲ್ಲಲ್ಲಿ ಮಕ್ಕಳ ಮಾರಾಟದ, ಜೀತಕ್ಕೆ ಇಡುವ ಪ್ರಕರಣಗಳು ಇದ್ದೆ ಇದೆ, ಹೋಟೇಲ್, ಮನೆಗೆಲಸ, ಕೈಗಾರಿಕೆಗಳಿಗೆ, ಕಾಮುಕರಿಗೆ, ವ್ಯಾಪಾರಿ, ಲೈಂಗಿಕ ಶೋಷಣೆಗೆ ಮಕ್ಕಳನ್ನು ದೂಡಲೆಂದು ಮಕ್ಕಳನ್ನು ಕದಿಯುವ, ಮಾರುವ ಮತ್ತು ಮಕ್ಕಳಿಗೆ ಆಮೀಷಗಳನ್ನೊಡ್ಡಿ ಹಾದಿ ತಪ್ಪಿಸುವುದನ್ನೆ ವೃತ್ತಿಯನ್ನಾಗಿ ಕೆಲಸ ಮಾಡಿಕೊಂಡಿರುವವರು ಇನ್ನೂ ಇರುವುದು ಅಪಾಯಕಾರಿಯಾಗಿದೆ. ಇಂತಹ ವ್ಯಕ್ತಿಗಳು ಮತ್ತು ಗುಂಪುಗಳನ್ನು ಪೋಲೀಸರು ಬಂಧಿಸುತ್ತಿಲ್ಲ. ಅವರನ್ನು ಬಂಧಿಸಿದರೂ ಪರಿಣಾಮಕಾರಿಯಾಗಿ ಶಿಕ್ಷೆಯಾಗುವುದಿಲ್ಲ. ಯಾಕೆ?

೬) ಮಕ್ಕಳ ಮೇಲೆ ಹೀಗೆ ಅವ್ಯಾಹತವಾಗಿ ನಡೆಯುತ್ತಿರುವ ಶೋಃಷಣೆಯನ್ನು ತಡೆಯಲು ಸ್ಥಳೀಯವಾಗಿ, ರಾಜ್ಯ ಹಾಗೂ ರಾಷ್ಟ್ರ ಮಟ್ಟದಲ್ಲಿ ಕಾನೂನು ವ್ಯವಸ್ಥೆಗಳಿದ್ದರೂ ಕೂಡ ಅವುಗಳು ಪರಿಣಾಮಕಾರಿ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತಿಲ್ಲ. ಯಾಕೆ? ಈ ಎಲ್ಲಾ ಪ್ರಶ್ನೆಗಳನ್ನು ಪರೀಕ್ಷೆಗೊಳಪಡಿಸಿ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

**ಅಧ್ಯಯನದ ಉದ್ದೇಶಗಳು:**

ಪ್ರಸ್ತುತ ಅಧ್ಯಯನದಲ್ಲಿ ಈ ಕೆಳಗಿನ ನಿರ್ಧಿಷ್ಠ ಉದ್ಧೇಶಗಳನ್ನು ರೂಪಿಸಿಕೊಳ್ಳಲಾಗಿದೆ.

೧) ಮಕ್ಕಳ ಹಕ್ಕುಗಳನ್ನು ಅಧ್ಯಯನ ಮಾಡುವುದು.

೨) ಪ್ರಸ್ತುತ ಉಡುಪಿ ಜಿಲ್ಲೆಯಲ್ಲಿನ ಮಕ್ಕಳ ಸ್ಥಿತಿಗತಿ ಮತ್ತು ಸಮಸ್ಯೆಗಳನ್ನು ತಿಳಿಯುವುದು.

೩) ಪ್ರಸ್ತುತ ಉಡುಪಿ ಜಿಲ್ಲಿಯಲ್ಲಿನ ಮಕ್ಕಳಿಗಿರುವ ಕಾನೂನುಬದ್ಧ ವ್ಯವಸ್ಥೆಗಳನ್ನು ಪರಿಶೀಲಿಸುವುದು.

೪) ಮಕ್ಕಳ ಹಕ್ಕುಗಳಿಗೂ ಮತ್ತು ಮಕ್ಕಳ ಅಭಿವೃದ್ಧಿಗೆ ನೇರ ಸಂಬಂಧವಿದೆಯೇ ಎಂಬುವುದನ್ನು ಪರೀಕ್ಷಿಸುವುದು.

**ಅಧ್ಯಯನದ ಊಹೆಗಳು:**

೧) ಉಡುಪಿ ಜಿಲ್ಲೆಯಲ್ಲಿ ಇಂದಿಗೂ ಕೂಡ ಮಕ್ಕಳ ಸ್ಥಿತಿಗತಿ ಮತ್ತು ಸಮಸ್ಯೆಗಳು ತೀವ್ರ ಸ್ವರೂಪದಲ್ಲಿದೆ.

೨) ಉಡುಪಿ ಜಿಲ್ಲೆಯಲ್ಲಿ ಮಕ್ಕಳ ಅಭಿವೃದ್ಧಿಯಲ್ಲಿ ಕಾನೂನುಬದ್ಧ ವ್ಯವಸ್ಥೆಗಳ ಪಾತ್ರ ಗಣನೀಯವಾಗಿದೆ.

೩) ಮಕ್ಕಳ ಹಕ್ಕುಗಳಿಗೂ ಮತ್ತು ಮಕ್ಕಳ ಅಭಿವೃದ್ಧಿಗೂ ನೇರ ಸಂಬಂಧವಿದೆ.

**ಅಧ್ಯಯನದ ವಿಧಾನಗಳು:**

ಸಂಶೋಧನೆಯು ವಿವರಣಾತ್ಮಕ ವಿನ್ಯಾಸವನ್ನು ಒಳಗೊಂಡಿರುತ್ತದೆ. ಸಂಶೋಧಕರು ಮಾಹಿತಿಯನ್ನು ಪ್ರಾಥಮಿಕ ಮಾಹಿತಿ ಮತ್ತು ಆನುಷಂಗಿಕ ಮಾಹಿತಿಯ ಮೂಲಕ ಪಡೆಯುತ್ತಾರೆ. ಪ್ರಾಥಮಿಕ ಮಾಹಿತಿಯನ್ನು ಪ್ರಶ್ನಾವಳಿಗಳ, ಗಂಪು ಚರ್ಚೆಗಳ, ಅವಲೋಕನಗಳ ಮೂಲಕ ಪಡೆಯಲಾಗುವುದು. ಹಾಗೆಯೇ ಅನುಷಂಗಿಕ ಮಾಹಿತಿಯನ್ನು ಸಾಹಿತ್ಯಗಳ ಅಧ್ಯಯನದ ಮೂಲಕ, ಪುಸ್ತಕಗಳಿಂದ, ಅಂತರ್ಜಾಲಗಳ ಮೂಲಕ ಪಡೆಯಲಾಗುವುದು. ಇಲ್ಲಿ ೫೦ ನಮೂನೆ/ಮಾಹಿತಿದಾರರನ್ನು ತೆಗೆದುಕೊಳ್ಳಲಾಗುವುದು. ಪೂರ್ವ ಪರೀಕ್ಷೆಗೊಳಪಡಿಸಿದ ಪ್ರಶ್ನಾವಳಿಯನ್ನು ಅಳವಡಿಸಿ ಮಾಹಿತಿಯನ್ನು ಪಡೆಯಲಾಗುವುದು. ಉಡುಪಿ ಜಿಲ್ಲೆಯನ್ನು ಅಧ್ಯಯನದ ವ್ಯಾಪ್ತಿಯನ್ನಾಗಿ ತೆಗೆದುಕೊಂಡು, ಈ ಕೆಳಗಿನ ವಿಧಾನಗಳನ್ನು ಬಳಸಿ ಮಾಹಿತಿಯನ್ನು ಪಡೆಯಲಾಗುವುದು.

**ಮಾಹಿತಿದಾರರ ಪ್ರಕಾರಗಳು:**

ಪ್ರಸ್ತುತ ಅಧ್ಯಯನದಲ್ಲಿ ಮಾಹಿತಿದಾರರನ್ನು ಮುಖ್ಯ ವ್ಯಕ್ತಿಗಳ ಎರಡು ಗಂಪುಗಳನ್ನಾಗಿ ಮಾಡಲಾಗಿದೆ.

೧)**ಶಾಲೆಯ ಮೂಲದಿಂದ ತೆಗೆದುಕೊಂಡ ವ್ಯಕ್ತಿಗಳು**. ಅಂದರೆ ಶಾಲಾ ಮುಖ್ಯಸ್ಥರು, ಬಿ.ಆರ್.ಪಿ, ಸಿ.ಆರ್.ಪಿ, ಎಸ್.ಡಿ.ಎಮ್.ಸಿ. ಸದಸ್ಯರುಗಳನ್ನು ಮಾದರಿಯನ್ನಾಗಿ ತೆಗೆದುಕೊಳ್ಳಲಾಗುವುದು.

ಉಡುಪಿ ಜಿಲ್ಲೆಯಲ್ಲಿ ಐದು ಶಿಕ್ಷಣ ವಲಯಗಳು ಇದೆ. ಅವುಗಳೆಂದರೆ ಕಾರ್ಕಳ, ಉಡುಪಿ, ಬ್ರಹ್ಮಾವರ, ಕುಂದಾಪುರ ಮತ್ತು ಬೈಂದೂರು ವಲಯಗಳಿವೆ. ಈ ಎಲ್ಲಾ ವಲಯಗಳ ಅಡಿಯಲ್ಲಿ ಬರುವ ಒಂದೊಂದು ಶಾಲೆಯಿಂದ ಶಾಲಾಮುಖ್ಯಸ್ಥರು ಒಬ್ಬರು, ಬಿ.ಆರ್.ಪಿ–ಒಂದು, ಸಿ.ಆರ.ಪಿ–ಒಂದು, ಎಸ್.ಡಿ.ಎಮ್.ಸಿ ಸದಸ್ಯರು–ಎರಡು. ಇಲ್ಲಿ ಇಪ್ಪೈದು ಮಾದರಿಯನ್ನು ಒಳಗೊಡು ಮಾಹಿತಿ ಸಂಗ್ರಹಿಸಲಾಗುತ್ತದೆ.

೨) **ನೇರವಾಗಿ ಮಕ್ಕಳೊಂದಿಗೆ ಕೆಲಸ ಮಾಡುವ ಮೂಲದಿಂದ ತೆಗೆದುಕೊಂಡ ವ್ಯಕ್ತಿಗಳು**. ಅಂದರೆ ಸಂಘ ಸಂಸ್ಥೆಯ ಮುಖ್ಯಸ್ಥರು, ಸಮಾಜ ಕಾರ್ಯಕರ್ತರು, ಜೆ.ಜೆ.ಬಿ, ಸಿ.ಡಬ್ಲ್ಯು.ಸಿ, ಎಸ್.ಜೆ.ಪಿ.ಯು, ಸಿ.ಡಬ್ಲ್ಯು.ಓ, ಐ.ಸಿ.ಪಿ.ಯು, ಮಹಿಳಾ ಮತ್ತು ಮಕ್ಕಳ ಇಲಾಖೆ, ಮುಂತಾದವರು.

ಉಡುಪಿ ಜಿಲ್ಲೆಯಲ್ಲಿ ನೇರವಾಗಿ ಮಕ್ಕಳೊಂದಿಗೆ ಕೆಲಸ ಮಾಡುವ ವ್ಯಕ್ತಿಗಳಿಂದ ಅಂದರೆ ಉಡುಪಿಯ ಜೆ.ಜೆ.ಬಿ, ಸಿ.ಡಬ್ಲ್ಯು.ಸಿ,–ಐದು, ಎಸ್.ಜೆ.ಪಿ.ಯು–ಐದು, ಸಂಘ ಸಂಸ್ಥೆಯ ಮುಖ್ಯಸ್ಥರು–ಐದು, ಐ.ಸಿ.ಪಿ.ಯು–ಐದು, ಮಹಿಳಾ ಮತ್ತು ಮಕ್ಕಳ ಇಲಾಖೆ ಮತ್ತು ಸಮಾಜ ಕಾರ್ಯಕರ್ತರು–ಐದು. ಇಲ್ಲಿಂದಲೂ ಇಪ್ಪೈದು ಮಾದರಿಯನ್ನು ಒಳಗೊಂಡು ಮಾಹಿತಿ ಸಂಗ್ರಹಿಸಿ ಈ ಆಧಾರಗಳಿಂದ ವರದಿಯನ್ನು ಸಿದ್ಧಪಡಿಸಲಾಗುವುದು.

**ಅಧ್ಯಯನದ ವ್ಯಾಪ್ತಿ:**

ಉಡುಪಿ ಜಿಲ್ಲೆಯನ್ನು ಅಧ್ಯಯನದ ವ್ಯಾಪ್ತಿಯನ್ನಾಗಿ ತೆಗೆದುಕೊಂಡ ಈ ಅಧ್ಯಯನವು ಮಕ್ಕಳ ಹಕ್ಕುಗಳು, ಸಮಸ್ಯೆಗಳು ಮತ್ತು ಅಭಿವೃದ್ಧಿಯ ಸ್ಥಿತ್ಯಂತರಗಳನ್ನು ಒಳಗೊಳ್ಳುವುದು. ನಗರ ಪ್ರದೇಶದಲ್ಲಿ ಹಾಗೂ

ಗ್ರಾಮ ಪ್ರದೇಶದಲ್ಲಿ ವಾಸಿಸುವ ಮಕ್ಕಳ ಸ್ಥಿತಿಗತಿಯ ಬಗ್ಗೆ ಗಮನ ಹರಿಸಲಾಗುವುದು. ಮಕ್ಕಳ ಹಕ್ಕುಗಳ ಕುರಿತ ಮುಂದಿನ ಅಧ್ಯಯನಕ್ಕೆ ಈ ಅಧ್ಯಯನವು ಅವಕಾಶಗಳನ್ನು ಹುಟ್ಟು ಹಾಕುವುದು.

**ಪರಿಕಲ್ಪನಾತ್ಮಕ ಚೌಕಟ್ಟು:**

ನಮ್ಮ ಸಂವಿಧಾನದಲ್ಲಿ ಮಕ್ಕಳಿಗೆ ಜೀವಿಸುವ ಹಾಗೂ ರಕ್ಷಣೆ ಹೊಂದುವ ಹಕ್ಕುಗಳನ್ನು ನೀಡಲಾಗಿದೆ. ವಿಶ್ವಸಂಸ್ಥೆಯ ಮಕ್ಕಳ ಹಕ್ಕುಗಳ ಒಡಂಬಡಿಕೆಯು ಜೀವಿಸುವ, ರಕ್ಷಣೆ ಹೊಂದುವ, ವಿಕಾಸ ಹೊಂದುವ ಹಾಗೂ ಭಾಗವಹಿಸುವ ಹಕ್ಕನ್ನು ಮಗುವಿನ ಮೂಲಭೂತ ಹಕ್ಕನ್ನಾಗಿ ಪ್ರತಿಪಾದಿಸುತ್ತದೆ. ಆದರೆ ಪ್ರಸ್ತುತ ಸನ್ನಿವೇಶದಲ್ಲಿ ನಾನಾ ಕಾರಣಗಳಿಂದ ವಿಶ್ವದೆಲ್ಲೆಡೆಯು ಮಕ್ಕಳು ತಮ್ಮ ಹಕ್ಕುಗಳಿಂದ ವಂಚಿತರಾಗಿ ಶೋಷಣೆಗೆ ಒಳಪಟ್ಟಿರುತ್ತಾರೆ. ತಮ್ಮ ಹಕ್ಕುಗಳ ಪರವಾಗಿ ಧ್ವನಿ ಎತ್ತಲಾಗದ ಪರಿಸ್ಥಿತಿ ಅವರದ್ದಾಗಿರುತ್ತದೆ. ಎಷ್ಟೋ ಸಲ ಮಕ್ಕಳ ಆರೈಕೆ ಮತ್ತು ರಕ್ಷಣೆಯನ್ನು ಈ ಸಮಾಜವು ಮಕ್ಕಳಿಗೆ ನೀಡುತ್ತಿರುವ ಸೌಲಭ್ಯ ಎಂದು ಪರಿಗಣಿಸುತ್ತಿದೆಯೇ ಹೊರತು, ರಕ್ಷಣೆ ಮತ್ತು ಆರೈಕೆ ಪಡೆಯುವುದು ಮಕ್ಕಳ ಮೂಲಭೂತ ಹಕ್ಕು ಹಾಗೂ ಈ ಸಮಾಜದ ಆದ್ಯ ಕರ್ತವ್ಯವೆಂದು ಅರ್ಥಮಾಡಿಕೊಳ್ಳದಿರುವುದು ದುರಂತವೇ ಸರಿ. ದೇಶವು ಅಭಿವೃದ್ಧಿ ಪಥದಲ್ಲಿ ಸಾಗಬೇಕಾದರೆ ಮಕ್ಕಳ ಹಕ್ಕುಗಳನ್ನು ಕಾಪಾಡುವುದು ಅವಶ್ಯಕ. ಪ್ರತಿಯೊಂದು ಮಗು ಜೀವಿಸುವ, ರಕ್ಷಣೆ ಪಡೆಯುವ, ವಿಕಾಸ ಹೊಂದುವ ಹಾಗೂ ಭಾಗವಹಿಸುವ ಹಕ್ಕನ್ನು ಅನುಭವಿಸಬೇಕಾಗಿದೆ. ಈ ನಿಟ್ಟಿನಲ್ಲಿ ನಾವೆಲ್ಲರೂ ಮಕ್ಕಳ ಹಕ್ಕುಗಳ ಧ್ವನಿಯಾಗಬೇಕು. ಈ ಬಗ್ಗೆ ಸಾಕಷ್ಟು ಅರಿವು ಸಮಾಜದಲ್ಲಿ ಮೂಡಬೇಕು.

ಮಕ್ಕಳ ಹಕ್ಕುಗಳು, ಮಕ್ಕಳ ಅಭಿವೃದ್ಧಿ ಹಾಗೂ ದೇಶದ ಅಭಿವೃದ್ಧಿಗೆ ನೇರ ಮತ್ತು ಸ್ಪಷ್ಟ ಸಂಬಂಧವಿದೆ. ಮಕ್ಕಳ ಹಕ್ಕುಗಳು ಮಕ್ಕಳ ಅಭಿವೃದ್ಧಿಗೆ ಒಂದು ಸಾಧನವಾಗಿದೆ. ಮಕ್ಕಳ ಅಭಿವೃದ್ಧಿಯಿಂದಾಗಿ ಒಂದು ದೇಶದ ಅಭಿವೃದ್ಧಿಯು ಸಾಧ್ಯವಾಗುತ್ತದೆ. ಹಾಗಾಗಿ ಒಂದು ದೇಶವು ಅಭಿವೃದ್ಧಿ ಪಥದಲ್ಲಿ ಸಾಗಬೇಕಾದರೆ ಮಕ್ಕಳ ಹಕ್ಕುಗಳನ್ನು ಕಾಪಾಡುವುದು ಅವಶ್ಯ. ಪ್ರಸ್ತುತ ಯಾವುದೇ ದೇಶದ ಅಭಿವೃದ್ಧಿಯನ್ನು ಅಲ್ಲಿಯ "ಮಕ್ಕಳ ಸ್ಥಿತಿ"ಯನ್ನು ನೋಡಿ ನಿರ್ಧರಿಸಬಹುದು. ಹಿಂದೆಲ್ಲಾ ದೇಶದ ಅಭಿವೃದ್ಧಿಯನ್ನು ತಲಾಆದಾಯದಿಂದ ಅಳೆಯಲಾಗುತಿತ್ತು. ಆದರೆ ಈಗ ಮಾನವ ಅಭಿವೃದ್ಧಿ ಸೂಚ್ಯಂಕದ ಮೂಲಕ ಅಳೆಯಲಾಗುತ್ತದೆ. ಈ ಸೂಚ್ಯಂಕಗಳ ನಿರ್ಮಾಣದಲ್ಲಿ ಮಕ್ಕಳ ವಿಚಾರ ಬಹು ಮುಖ್ಯವಾದುದು. ಐದು ವರ್ಷದೊಳಗಿನ ಮಕ್ಕಳ ಮರಣ ಪ್ರಮಾಣವನ್ನು ದೇಶ ಮುಂದುವರೆಯುತ್ತಿದೆಯೇ ಅಥವಾ ಇಲ್ಲವೇ ಎಂಬುದನ್ನು ನಿರ್ಧರಿಸಲು ಮೂಲ ಅಭಿವೃದ್ಧಿ ಸೂಚಕವನ್ನಾಗಿ ಪರಿಗಣಿಸುತ್ತಾರೆ. ಇನ್ನಿತರ ಕೆಲವು ಅಭಿವೃದ್ಧಿ ಸೂಚಕಗಳು: ಶಿಶು ಮರಣ ಪ್ರಮಾಣ, ವಿಕಲಾಂಗತೆಯ ಪ್ರಮಾಣ, ಲಿಂಗ ಪ್ರಮಾಣ, ರೋಗ ನಿರೋಧಕ, ಶಾಲಾ ದಾಖಲಾತಿ ಮತ್ತು ಶಾಲೆ ತೊರೆಯುವವರ ಪ್ರಮಾಣ, ಮದುವೆಯ ವಯಸ್ಸು, ತಾಯಂದಿರ ಮರಣ ಪ್ರಮಾಣ ಇತ್ಯಾದಿ.

ಹಕ್ಕುಗಳಿರುವ ಮಕ್ಕಳ ಶಾಲೆ ಇಂದಿನ ಅವಶ್ಯಕತೆ. ಶಾಲೆ ಮಕ್ಕಳ ಹಕ್ಕುಗಳನ್ನು ಎತ್ತಿ ಹಿಡಿಯುವ ಪ್ರಮುಖ ಸ್ಥಳವಾಗಿದೆ. ಹೀಗಾಗಿ ಸರಕಾರವು ಮಕ್ಕಳ ಹಕ್ಕುಗಳ ರಕ್ಷಣೆಗಾಗಿ ಕಾನೂನುಬದ್ಧ ವ್ಯವಸ್ಥೆಯನ್ನು ಪ್ರತಿಯೊಂದು ಶಾಲಾವಾರು ಮತ್ತು ಜಿಲ್ಲಾವಾರು ಮಾಡಿದೆ.

ಪ್ರಸ್ತುತ ಅಧ್ಯಯನವನ್ನು ಉಡುಪಿ ಜಿಲ್ಲೆಯಲ್ಲಿನ ಸರಕಾರಿ ಶಾಲೆಗಳು ಮತ್ತು ಶಾಲೆಯನ್ನು ಬಿಟ್ಟು ಹೊರಗುಳಿದು ಸಂಕಷ್ಟದಲ್ಲಿರುವ ಮಕ್ಕಳು, ಅವರ ಸಮಸ್ಯೆಗಳು, ಅವರ ಅಭಿವೃದ್ಧಿ ಮತ್ತು ಪ್ರಸ್ತುತ ಉಡುಪಿ ಜಿಲ್ಲೆಯಲ್ಲಿ ಇರುವ ಮಕ್ಕಳ ಹಕ್ಕುಗಳ ಕಾನೂನುಬದ್ಧ ವ್ಯವಸ್ಥೆಗಳನ್ನು ಮುಖ್ಯವಾಗಿಟ್ಟುಕೊಂಡು ಅಧ್ಯಯನದ ಪರಿಕಲ್ಪನಾತ್ಮಕ ಚೌಕಟ್ಟನ್ನು ರಚಿಸಲಾಗಿದೆ. ಈ ಹಿನ್ನಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ನಡೆಸಲಾಗುವುದು.

## ಅಧ್ಯಯನದ ಇತಿಮಿತಿಗಳು:

ಈ ಅಧ್ಯಯನವನ್ನು ಉಡುಪಿ ಜಿಲ್ಲೆಗೆ ಸೀಮಿತಗೊಳಿಸಲಾಗಿದೆ. ಆದ್ದರಿಂದ ಈ ಅಧ್ಯಯನದಿಂದ ಬರುವ ಫಲಿತಗಳು ಇತರ ಯಾವುದೇ ಜಿಲ್ಲೆಗೆ ಅನ್ವಯವಾಗುವುದಿಲ್ಲ. ಹಾಗೆಯೆ ಸಂಶೋಧಕರು ಉಡುಪಿ ಜಿಲ್ಲೆಯಿಂದ ತೆಗೆದುಕೊಂಡ ನಮೂನೆಯಿಂದ ಮಾಹಿತಿಯನ್ನು ಸಂಗ್ರಹಿಸಿರುವುದರಿಂದ ಇದು ಇತರ ಯಾವುದೇ ಜಿಲ್ಲೆಯ ನಮೂನೆ/ಮಾಹಿತಿದಾರರನ್ನು ಒಳಗೊಳ್ಳವುದಿಲ್ಲ. ಪ್ರಸ್ತುತ ಅಧ್ಯಯನವು ನಿಗಧಿತ ಸಮಯದ ಚೌಕಟ್ಟನ್ನು ಹೊಂದಿರುವುದರಿಂದ ತುಂಬಾ ಆಳವಾದ ಹಾಗೂ ವಿಸ್ತಾರವಾದ ಅಧ್ಯಯನ ಸಾಧ್ಯವಾಗಿರುವುದಿಲ್ಲ.

## ಸಾಹಿತ್ಯ ವಿಮರ್ಶೆ:

ವಾಸುದೇವ ಶರ್ಮಾರವರ "ಮಕ್ಕಳಿಗಾಗಿ ಮಕ್ಕಳ ಹಕ್ಕುಗಳು" ಪುಸ್ತಕವನ್ನು ೨೦೧೧ರಲ್ಲಿ 'ಚೈಲ್ಡ್ ರೈಟ್ ಟ್ರಸ್ಟ್', ಬೆಂಗಳೂರು ಪ್ರಕಟಗೊಳಿಸಿತು. ಈ ಪುಸ್ತಕವು ಮಕ್ಕಳ ಹಕ್ಕುಗಳ ವಿಶೇಷ ಗ್ರಾಮಸಭೆ, ಮೀನಾ ತಂಡಗಳು ಮತ್ತು ಮಕ್ಕಳ ಹಕ್ಕುಗಳ ಸಂಘಗಳಲ್ಲಿ ಪರಿಣಾಮಕಾರಿಯಾಗಿ ಚರ್ಚಿಸಲು ಕೆಲವು ಮಾಹಿತಿಗಳನ್ನು ಒಳಗೊಂಡ ಪುಸ್ತಕವಾಗಿದೆ. ಈ ಪುಸ್ತಕದಲ್ಲಿ ಶಾಲೆ, ಶಿಕ್ಷಣ ಮತ್ತು ಮಕ್ಕಳ ಹಕ್ಕುಗಳು, ಮಕ್ಕಳ ಹಕ್ಕುಗಳ ಸಂಘದ ರಚನೆ ಮತ್ತು ನಿರ್ವಹಣೆ, ಮಕ್ಕಳ ಹಕ್ಕುಗಳ ಸಂಘದ ರಚನೆ ನಿದೇಶಿಸಿ ಶಿಕ್ಷಣ ಇಲಾಖೆಯ ಸುತ್ತೋಲೆಗಳು, ಮಕ್ಕಳ ಹಕ್ಕುಗಳ ಪ್ರತಿನಿಧಿ ಮೀನಾ ಕ್ಲಬ್, ಮಕ್ಕಳ ನ್ಯಾಯ ಕಾಯಿದೆ, ರಕ್ಷಣಾ ಆಯೋಗಗಳು, ಕಡ್ಡಾಯ ಮತ್ತು ಉಚಿತ ಶಿಕ್ಷಣ ಕಾಯಿದೆ, ಕರ್ನಾಟಕದಲ್ಲಿ ಮಕ್ಕಳ ಸ್ಥಿತಿಗತಿಯನ್ನು ವಿವರಿಸಲಾಗಿದೆ.

ವಾಸುದೇವ ಶರ್ಮಾರವರ "ಕಲ್ಪನೆಯಿಂದ ಸಾಧ್ಯತೆಯೆಡೆಗೆ–ಮಕ್ಕಳ ಹಕ್ಕುಗಳು" ಪುಸ್ತಕವನ್ನು ೨೦೦೮ರಲ್ಲಿ 'ಚೈಲ್ಡ್ ರೈಟ್ ಟ್ರಸ್ಟ್', ಬೆಂಗಳೂರು ಪ್ರಕಟಗೊಳಿಸಿತು. ಈ ಪುಸ್ತಕವು ಶಿಕ್ಷಕರು, ಸಮುದಾಯ ಕಾರ್ಯಕರ್ತರು, ಸರ್ಕಾರದ ವಿವಿಧ ಇಲಾಖೆಗಳ ಸಿಬ್ಬಂದಿ, ಮಾಧ್ಯಮಗಳು, ಜನಪ್ರತಿನಿಧಿಗಳು ಮತ್ತು ಮಕ್ಕಳೊಡನೆ ಒಡನಾಡುವವರು ಹಾಗೂ ಮಕ್ಕಳ ವಿಚಾರಗಳ ಬಗ್ಗೆ ಕೆಲಸ ಮಾಡುವವರೆಲ್ಲರಿಗಾಗಿ ಮಾಹಿತಿಯನ್ನು ಒದಗಿಸುತ್ತದೆ. ಈ ಪುಸ್ತಕದಲ್ಲಿ ಮಕ್ಕಳ ಹಕ್ಕುಗಳು, ಮಕ್ಕಳ ಹಕ್ಕುಗಳ ಹಿನ್ನಲೆ, ದೃಷ್ಟಿಕೋನ, ಮನೋಭಾವದ ಬದಲಾವಣೆಗಾಗಿ ಮಕ್ಕಳ ಹಕ್ಕುಗಳು, ಮಕ್ಕಳ ಹಕ್ಕುಗಳ ಒಡಂಬಡಿಕೆಗೆ ಒಪ್ಪಿಗೆ, ಪ್ರಚಾರ, ಜಾರಿ ಮತ್ತು ವರದಿ, ಮಕ್ಕಳಿಗಾಗಿ ಜಾಗತಿಕ ಚಳುವಳಿ, ವಿಶ್ವಸಂಸ್ಥೆಯ ವಿಶೇಷಾಧಿವೇಶನ, ಸರಕಾರದ ನೀತಿ ಮತ್ತು ಯೋಜನೆಗಳು, ಮಕ್ಕಳ ಹಕ್ಕುಗಳ ಕುರಿತು ತರಬೇತಿ, ಕಾರ್ಯಗಾರಕ್ಕೆ ತಯ್ಯಾರಾಗಲು ಸವಿವರವನ್ನು ಒಳಗೊಂಡ ಪುಸ್ತಕವಾಗಿದೆ..

ಹಮೀದ್ ಮಂಜೇಶ್ವರ್, ರೆನ್ನಿ ಡಿಸೋಜ, ತುಕಾರಾಮ ಎಕ್ಕಾರುರವರ "ಜನ ಸಾಮಾನ್ಯರಿಗಾಗಿ ಮಕ್ಕಳ ಹಕ್ಕುಗಳ ಕೈಪಿಡಿ" ಪುಸ್ತಕವನ್ನು ೨೦೦೩ರಲ್ಲಿ ವೆಲೊರೆಡ್, ಮಂಗಳೂರು ಪ್ರಕಟಗೊಳಿಸಿತು. ಈ ಪುಸ್ತಕದಲ್ಲಿ ಮಕ್ಕಳ ಸ್ಥಿತಿಗತಿ, ಸಮಸ್ಯೆಯನ್ನು ಒಳಗೊಂಡ ಪುಸ್ತಕವಾಗಿದೆ.

ವಾಸುದೇವ ಶರ್ಮಾರವರ "ಮಕ್ಕಳ ರಕ್ಷಕರು ನಾವು, ನೀವು ಮತ್ತು ಎಲ್ಲರೂ" ಪುಸ್ತಕವನ್ನು ೨೦೦೫ರಲ್ಲಿ ಸಂವಹನ, ಬೆಂಗಳೂರು ಪ್ರಕಟಿಸಿತು. ಈ ಪುಸ್ತಕವು ಕಾನೂನಿನೊಡನೆ ಸಂಘರ್ಷದಲ್ಲಿರುವ ಮಕ್ಕಳು ಹಾಗೂ ಮಕ್ಕಳ ನ್ಯಾಯಮಂಡಲಿ, ಪೋಷಣೆ ಮತ್ತು ರಕ್ಷಣೆಯ ಅವಶ್ಯಕತೆಯಿರುವ ಮಕ್ಕಳು ಮತ್ತು ಮಕ್ಕಳ ಕಲ್ಯಾಣ ಸಮಿತಿ, ಸಂಸ್ಥೇತರ ಪುರ್ನವಸತಿ, ದತ್ತು ಮಕ್ಕಳ ಹಿತ ಕಾಪಾಡಲು, ಮುಂತಾದ ವಿಷಯಗಳನ್ನು ಒಳಗೊಂಡ ವಿವರಣೆಯಿದೆ.

ಜಿಯೋ ಡಿ'ಸಿಲ್ವಾರವರ "ಮಕ್ಕಳ ನ್ಯಾಯಕಾಯಿದೆ ಏನು? ಏಕೆ?" ಪುಸ್ತಕವನ್ನು ೨೦೦೬ರಲ್ಲಿ ಪಡಿ, ಮಂಗಳೂರು ಪ್ರಕಟಗೊಳಿಸಿತು. ಈ ಪುಸ್ತಕದಲ್ಲಿ ಬಾಲ ನ್ಯಾಯ ಮಂಡಲಿ, ಮಕ್ಕಳ ಕಲ್ಯಾಣ ಸಮಿತಿ, ದತ್ತು ಹಾಗೂ ಪುರ್ನವಸತಿ, ಪುನರ್ವಸತಿ ಮತ್ತು ಸಾಮಾಜಿಕ ಪುನರ್ಸಮಗ್ರತೆ ಮುಂತಾದ ವಿಚಾರಗಳನ್ನು ಒಳಗೊಂಡಿದೆ.

ಹಾಗೆಯೇ ಪರಿಣಾಮಕಾರಿಯಾದ ಅಧ್ಯಯನಗೋಸ್ಕರ ಸಾಹಿತ್ಯಗಳ ವಿಮರ್ಶೆಯನ್ನು ಅಂತರ್‌ಜಾಲ, ಮಾಹಿತಿಪತ್ರ, ಭಿತ್ತಿ ಪತ್ರಗಳ ಉಪಯೋಗ, ದಿನಪತ್ರಿಕೆಯಿಂದ ದೊರೆತ ಮಾಹಿತಿಗಳ ಅಧ್ಯಯನವನ್ನು ನಡೆಸಲಾಗಿದೆ. ಈ ಎಲ್ಲಾ ಹಾಗೂ ಇನ್ನಿತರ ಸಾಹಿತ್ಯಗಳ ಅಧ್ಯಯನದ ಆಧಾರದ ಮೇಲೆ ಪ್ರಸ್ತುತ ಅಧ್ಯಯನದ ರೂಪು ರೇಷೆಗಳನ್ನು ರಚಿಸಿ ಅಧ್ಯಯನವನ್ನು ಕೈಗೊಳ್ಳಲಾಗಿದೆ.

**ಅಧ್ಯಾಯಗಳು:**

- ಮೊದಲನೆಯ ಅಧ್ಯಾಯದಲ್ಲಿ ಪೀಠಿಕೆ, ಸಮಸ್ಯೀಕರಣ, ಅಧ್ಯಯನದ ಉದ್ದೇಶಗಳು, ಊಹೆಗಳು, ಅಧ್ಯಯನ ವಿಧಾನ, ಇತಿಮಿಗಳು ಹಾಗೂ ಅಧ್ಯಯನದ ಪರಿಕಲ್ಪನಾತ್ಮಕ ಚೌಕಟ್ಟನ್ನು ಹೇಳಲಾಗುವುದು.
- ಎರಡನೆಯ ಅಧ್ಯಾಯದಲ್ಲಿ ಮಕ್ಕಳ ಹಕ್ಕುಗಳು ಮತ್ತು ಅಭಿವೃದ್ಧಿ: ನೀತಿಗಳು, ಯೋಜನೆಗಳು ಹಾಗೂ ಅಡಚಣೆಗಳು ಇತ್ಯಾದಿಗಳನ್ನು ವಿವರಿಸಲಾಗುವುದು.
- ಮೂರನೆಯ ಅಧ್ಯಾಯದಲ್ಲಿ ಉಡುಪಿ ಜಿಲ್ಲೆಯಲ್ಲಿರುವ ಮಕ್ಕಳ ಹಕ್ಕುಗಳ ಕಾನೂನುಬದ್ಧ ವ್ಯವಸ್ಥೆಗಳ ಬಗ್ಗೆ ಹೇಳುವುದರಿಂದ ಮೊದಲಿಗೆ ಉಡುಪಿ ಜಿಲ್ಲೆಯ ಸಂಕ್ಷಿಪ್ತ ರೂಪವನ್ನು ವಿವರಿಸಲಾಗುವುದು.
- ನಾಲ್ಕನೆಯ ಅಧ್ಯಾಯದಲ್ಲಿ ಮಕ್ಕಳ ಹಕ್ಕುಗಳು ಮತ್ತು ಅಭಿವೃದ್ಧಿಯ ಮಾಹಿತಿ ವಿಶ್ಲೇಷಣೆಯನ್ನು ಮಾಡಲಾಗುವುದು.
- ಐದನೆಯ ಅಧ್ಯಾಯವು ಸಮಾರೋಪ ಅಧ್ಯಾಯವಾಗಿರುತ್ತದೆ. ಮೇಲಿನ ಎಲ್ಲಾ ಅಧ್ಯಾಯಗಳಿಂದ ಬಂದ ಚರ್ಚೆಗಳು, ಫಲಿತಗಳು, ಮುಂದಿನ ಅಧ್ಯಯನಕ್ಕೆ ಬೇಕಾದ ಸಲಹೆ ಸೂಚನೆಗಳನ್ನು ಈ ಅಧ್ಯಾಯದಲ್ಲಿ ನೀಡಲಾಗಿದೆ.

# ಅಧ್ಯಾಯ ೨

## ಮಕ್ಕಳ ಹಕ್ಕುಗಳು ಮತ್ತು ಅಭಿವೃದ್ಧಿ: ನೀತಿಗಳು, ಯೋಜನೆಗಳು ಹಾಗೂ ಅಡಚಣೆಗಳು

ಮಕ್ಕಳ ಹಕ್ಕುಗಳು, ಮಕ್ಕಳ ಅಭಿವೃದ್ಧಿ ಹಾಗೂ ದೇಶದ ಅಭಿವೃದ್ಧಿಗೆ ನೇರ ಮತ್ತು ಸ್ಪಷ್ಟ ಸಂಬಂಧವಿದೆ. ಮಕ್ಕಳ ಹಕ್ಕುಗಳು ಮಕ್ಕಳ ಅಭಿವೃದ್ಧಿಗೆ ಒಂದು ಸಾಧನವಾಗಿದೆ. ಮಕ್ಕಳ ಅಭಿವೃದ್ಧಿಯಿಂದಾಗಿ ಒಂದು ದೇಶದ ಅಭಿವೃದ್ಧಿಯು ಸಾಧ್ಯವಾಗುತ್ತದೆ. ಹಾಗಾಗಿ ಒಂದು ದೇಶವು ಅಭಿವೃದ್ಧಿ ಪಥದಲ್ಲಿ ಸಾಗಬೇಕಾದರೆ ಮಕ್ಕಳ ಹಕ್ಕುಗಳನ್ನು ಕಾಪಾಡುವುದು ಅವಶ್ಯ. ಪ್ರಸ್ತುತ ಯಾವುದೇ ದೇಶದ ಅಭಿವೃದ್ಧಿಯನ್ನು ಅಲ್ಲಿಯ "ಮಕ್ಕಳ ಸ್ಥಿತಿ"ಯನ್ನು ನೋಡಿ ನಿರ್ಧರಿಸಬಹುದು. ಹಿಂದೆಲ್ಲಾ ದೇಶದ ಅಭಿವೃದ್ಧಿಯನ್ನು ತಲಾಆದಾಯದಿಂದ ಅಳೆಯಲಾಗುತಿತ್ತು. ಆದರೆ ಈಗ ಮಾನವ ಅಭಿವೃದ್ಧಿ ಸೂಚ್ಯಂಕದ ಮೂಲಕ ಅಳೆಯಲಾಗುತ್ತದೆ. ಈ ಸೂಚ್ಯಂಕಗಳ ನಿರ್ಮಾಣದಲ್ಲಿ ಮಕ್ಕಳ ವಿಚಾರ ಬಹು ಮುಖ್ಯವಾದುದು. ಐದು ವರ್ಷದೊಳಗಿನ ಮಕ್ಕಳ ಮರಣ ಪ್ರಮಾಣವನ್ನು ದೇಶ ಮುಂದುವರೆಯುತ್ತಿದೆಯೇ ಅಥವಾ ಇಲ್ಲವೇ ಎಂಬುದನ್ನು ನಿರ್ಧರಿಸಲು ಮೂಲ ಅಭಿವೃದ್ಧಿ ಸೂಚಕವನ್ನಾಗಿ ಪರಿಗಣಿಸುತ್ತಾರೆ. ಇನ್ನಿತರ ಕೆಲವು ಅಭಿವೃದ್ಧಿ ಸೂಚಕಗಳು: ಶಿಶು ಮರಣ ಪ್ರಮಾಣ, ವಿಕಲಾಂಗತೆಯ ಪ್ರಮಾಣ, ಲಿಂಗ ಪ್ರಮಾಣ, ರೋಗ ನಿರೋಧಕ, ಶಾಲಾ ದಾಖಲಾತಿ ಮತ್ತು ಶಾಲೆ ತೊರೆಯುವವರ ಪ್ರಮಾಣ, ಮದುವೆಯ ವಯಸ್ಸು, ತಾಯಂದಿರ ಮರಣ ಪ್ರಮಾಣ ಇತ್ಯಾದಿ.

'ಚೆನ್ನಾಗಿದ್ದೀರಾ?' ಯಾರನ್ನಾದರೂ ಭೇಟಿಯಾದಾಗ ಕುಶಲ ಕೇಳುವ ಮೊದಲ ಪ್ರಶ್ನೆ. 'ಚೆನ್ನಾಗಿದ್ದೇವೆ' ಎಂದು ಸಾಮಾನ್ಯವಾಗಿ ನಾವು ನೀಡುವ ಮೊದಲ ಉತ್ತರ. ಆ ನಂತರ ಸನ್ನಿವೇಶಕ್ಕೆ ತಕ್ಕಂತೆ, ಮನೆಯವರ ಸ್ಥಿತಿ-ಗತಿ, ಆರೋಗ್ಯ, ಮಳೆ-ಬೆಳೆ, ಕೆಲಸ-ಕಾರ್ಯ, ಮದುವೆ-ಮುಂಜಿ, ಹುಟ್ಟು-ಸಾವು, ಲಾಭ-ನಷ್ಟ, ಅಧಿಕಾರ ಬಂದದ್ದು-ಹೊದದ್ದು, ವಿದ್ಯೆ ಪಡೆದದ್ದು-ಪಡೆಯದೇ ಇದ್ದದ್ದು, ಸೋಲು-ಗೆಲುವು, ಆಸೆ-ನಿರಾಸೆ, ಟೀಕೆ-ಪ್ರಶಂಸೆ, ಹೀಗೆ ಇನ್ನೂ ಏನೇನೋ ನಮ್ಮ ಮಾತುಗಳಲ್ಲಿ ಬಂದು ಹೋಗುತ್ತವೆ.

ಇಂತಹದೊಂದು ಪ್ರಶ್ನೆಯನ್ನು ಒಂದು ಸಮುದಾಯ, ಸರ್ಕಾರಕ್ಕೆ ಕೇಳಿದರೆ ಎಂತಹ ಉತ್ತರ ಬಂದೀತು? ಚೆನ್ನಾಗಿರುವುದು-ಇಲ್ಲದಿರುವುದು ಅಥವಾ ಉತ್ತಮ ಸ್ಥಿತಿಯತ್ತ ಸಾಗಿರುವುದನ್ನು ಹೇಗೆ ಗುರುತಿಸುವುದು? ಸಮುದಾಯ, ರಾಜ್ಯ, ರಾಷ್ಟ್ರಗಳಿಗೆ ಈ ಪ್ರಶ್ನೆಯನ್ನು ಬೇರೆ ರೀತಿಯಲ್ಲಿ ಕೇಳುವುದು ರೂಢಿ.

'ನಿಮ್ಮ ದೇಶ ಅಭಿವೃದ್ಧಿ ಹೊಂದಿದೆಯೋ ಇಲ್ಲವೋ?'

ಈ ಪ್ರಶ್ನೆಗೆ ಉತ್ತರಿಸುವುದು ಹೇಗೆ? ಈ ಪ್ರಶ್ನೆಯನ್ನು ಕೆಲವು ದಶಕಗಳ ಹಿಂದೆ ಕೇಳಿದ್ದರೆ ಉತ್ತರ ಈ ಮುಂದಿನ ಕೆಲವು ಅಂಶಗಳನ್ನು ಆಧರಿಸಿರುತ್ತಿತ್ತು: ಎಷ್ಟು ಕೈಗಾರಿಕೆಗಳು ಇವೆ, ಕೈಗಾರಿಕೆಗಳಿಂದ ಎಷ್ಟು ಹಾಗೂ ಏನು ಉತ್ಪಾದನೆಯಾಗುತ್ತದೆ, ಅದರಿಂದ ಎಷ್ಟು ಲಾಭ ಬರುತ್ತಿದೆ, ಎಷ್ಟು ನದಿಗಳಿಗೆ ಅಣೆಕಟ್ಟು ಹಾಕಿ ನೀರು ಸಂಗ್ರಹಿಸಿ ಕೃಷಿ ಇಲ್ಲವೇ ವಿದ್ಯುತ್ ಉತ್ಪಾದನೆಗೆ ಬಳಕೆಯಾಗುತ್ತಿದೆ, ನಿಮ್ಮ ದೇಶದ ಒಟ್ಟು ಆದಾಯವೆಷ್ಟು, ಇದರಲ್ಲಿ ಹೊರದೇಶಗಳಿಗೆ ನಿಮ್ಮ ಉತ್ಪಾದನೆ ಅಥವಾ ಸೇವೆ ಮಾಡಿ ಗಳಿಸಿದ ಆದಾಯ ಎಷ್ಟು , ಇತ್ಯಾದಿ. ಈ ಎಲ್ಲಕ್ಕೂ ಉತ್ತರಗಳು ದೇಶದ ಒಟ್ಟು ಭೌತಿಕ ಆಸ್ತಿ ಅಥವಾ ಹಣದ ಅಳತೆ ಪಟ್ಟಿಯಿಂದ ಅಳೆದ ಉತ್ತರಗಳೇ

ಆಗಿರುತ್ತಿದ್ದವು. ಇಂತಹ ಸ್ಥಿತಿಯಲ್ಲಿ ಕೆಲವೇ ಕೆಲವರು ಹಣ ಅಥವಾ ಹಣ ತರಬಲ್ಲ ಶಕ್ತಿ, ಕೌಶಲ್ಯ ಅಥವಾ ಪ್ರಭಾವವನ್ನು ಬೆಳೆಸಿಕೊಂಡು ಅವುಗಳನ್ನು ಬಹುತೇಕ ಶೋಷಣೆಯಲ್ಲಿ ತೊಡಗಿಸುವುದೇ ನಡೆದಿತ್ತು. ಹೀಗಿರುವಾಗ ಒಂದು ದೇಶ ಶ್ರೀಮಂತವಾಗಿರಬಹುದು, ಅದರ ಒಟ್ಟು ಆದಾಯವೂ ಅಧಿಕವಾಗಿರಬಹುದು, ಅದನ್ನು ಅವೈಜ್ಞಾನಿಕವಾಗಿ ತಲಾದಾಯದ ರೂಪದಲ್ಲಿ ಹಂಚಿದಾಗಲೂ ಒಂದು ದೇಶ ಶ್ರೀಮಂತವಾಗಿ ಕಾಣುತ್ತಿತ್ತು. ಆದರೆ, ಬಡವರೇ ಅಧಿಕವಾಗಿರುವ ಭಾರತದಂತಹ ದೇಶಗಳಿಗೆ ಇದು ಸರಿಹೊಂದುತ್ತಿರಲಿಲ್ಲ. ತಲಾದಾಯ ಚೆನ್ನಾಗಿದೆ, ಹೀಗಾಗಿ, ನಮ್ಮ ದೇಶದ ಜನರೆಲ್ಲ ಸುಖವಾಗಿದ್ದಾರೆ ಎಂಬ ಸುಳ್ಳಿನ ನೆಲೆಯಲ್ಲೇ ಮುಂದಿನ ಯೋಜನೆಗಳೂ ನಡೆದು ಹೋಗುತ್ತಿದ್ದವು. ಇವುಗಳ ಬಗ್ಗೆ ವಿದೇಶೀ ಮ್ಯಾನೇಜ್‌ಮೆಂಟ್ ಸಂಸ್ಥೆಗಳು ಸರ್ವೇಕ್ಷಣೆ ಮಾಡಿ, ಸರ್ಕಾರಕ್ಕೆ ಹಾಗೂ ಅಂತಾರಾಷ್ಟ್ರೀಯ ಕಂಪೆನಿಗಳಿಗೆ ಸರಿಹೊಂದುವಂತೆ ಅಂಕಿಸಂಖ್ಯೆಗಳ (ಸುಳ್ಳುಗಳ ಸರಮಾಲೆಯ!) ವರದಿ ಹಾಗೂ ಸಲಹೆಗಳನ್ನು ನೀಡುತ್ತಿರುತ್ತವೆ.

ಇಂತಹ ಅವೈಜ್ಞಾನಿಕ ತಲಾದಾಯದ ಹಂಚಿಕೆ ಮೂಲಕ ಒಂದು ದೇಶ ಅಭಿವೃದ್ಧಿ ಹೊಂದಿದೆ ಅಥವಾ ಇಲ್ಲ ಎಂದು ಗುರುತಿಸುವ ವಿಧಾನದಲ್ಲಿದ್ದ ಮಿಥ್ಯೆಯನ್ನು ತಿಳಿದುಕೊಳ್ಳಲು ಇಡೀ ಜಗತ್ತು ಎಂಬತ್ತರ ದಶಕದವರೆಗೂ ಕಾಯಬೇಕಾಯಿತು. ತಲಾದಾಯದ ಏಕೈಕ ಅಭಿವೃದ್ಧಿ (!) ಸೂಚಕವನ್ನು ಕೈಬಿಟ್ಟು, ಒಂದು ದೇಶದ ಪ್ರಜೆಗಳಿಗೆ ಲಭ್ಯವಿರುವ ಸೇವೆಗಳು, ಸಂಪನ್ಮೂಲಗಳು, ಜನರ ಅನುಕೂಲಕರ ಬದುಕಿಗೆ ಅಗತ್ಯವಾದ ಮೂಲಸೌಕರ್ಯಗಳು ಇರುವುದು – ಇಲ್ಲದಿರುವುದನ್ನು ಪರಿಗಣಿಸಿ, ಜನರ ಬದುಕಿಗೆ ನೆರವಾಗುವ ಹಾಗೂ ಜನರ ವಿಕಾಸಕ್ಕೆ ದಾರಿಯಾಗುವ ವಿಚಾರಗಳು ಮತ್ತು ಸ್ಥಿತಿಗಳನ್ನು ಅನುಸರಿಸಿ, ದೇಶದ ಅಭಿವೃದ್ಧಿಯನ್ನು ಗುರುತಿಸುವ ಪರಿಪಾಠವನ್ನು ೯೦ರ ದಶಕದಲ್ಲಿ ಜಾರಿಗೆ ತರಲಾಯಿತು. ಅರ್ಥಶಾಸ್ತ್ರಜ್ಞರು, ಚಿಂತಕರು, ಮತ್ತಿತರರು ಜನರ ಜೀವನದ ಹಲವಾರು ಮಜಲುಗಳನ್ನು ಎದುರಿಟ್ಟುಕೊಂಡು ಮಾನವಾಭಿವೃದ್ಧಿ, ಸಾಮಾಜಿಕ ಸೂಚ್ಯಂಕಗಳನ್ನು ಅಭಿವೃದ್ಧಿಪಡಿಸಿದ್ದಾರೆ. ಇವುಗಳಲ್ಲಿ ಜನಸಂಖ್ಯೆ, ಜನನ – ಮರಣ, ಗಂಡು – ಹೆಣ್ಣುಗಳ ನಡುವಿನ ಅನುಪಾತ, ಜೀವಿತಾವಧಿ, ಅಕ್ಷರ ಬಲ್ಲವರು – ಬಾರದವರು, ಆರೋಗ್ಯ ಸೇವೆಗಳು ತಲುಪುತ್ತಿರುವುದು – ಇಲ್ಲದಿರುವುದು, ಆರೋಗ್ಯದ ಸ್ಥಿತಿಗತಿ, ರಸ್ತೆ – ಸಾರಿಗೆ, ಮಾಹಿತಿ, ಶುದ್ಧವಾದ ಕುಡಿಯುವ ನೀರಿನ ಲಭ್ಯತೆ, ಶಿಕ್ಷಣ ಇತ್ಯಾದಿ ಸೇರುತ್ತದೆ. ಈ ಮಾಹಿತಿಯನ್ನು ಆಧರಿಸಿ ವಿಶ್ಲೇಷಣೆ ನಡೆಸುವುದರ ಮೂಲಕ ದೇಶವೊಂದು ಅಭಿವೃದ್ಧಿ ಹೊಂದಿದೆಯೋ ಇಲ್ಲವೋ ಎಂದು ನಿರ್ಧರಿಸುವ ತೀರ್ಮಾನಕ್ಕೆ ಈಗ ಬರಲಾಗುತ್ತದೆ.

ಈ ಸೂಚ್ಯಂಕಗಳ ನಿರ್ಮಾಣದಲ್ಲಿ ಮಕ್ಕಳ ವಿಚಾರ ಬಹು ಮುಖ್ಯವಾದುದು. ಮಕ್ಕಳ ಹಕ್ಕುಗಳ ಒಡಂಬಡಿಕೆಯ ಹಿನ್ನೆಲೆಯಲ್ಲಿ ಹೇಳಬೇಕೆಂದರೆ, ಈ ಒಡಂಬಡಿಕೆಯ ಮೊದಲ ೪೧ ಪರಿಚ್ಛೇದಗಳನ್ನು ಯಥಾವತ್ತಾಗಿ ಅಭಿವೃದ್ಧಿ ಸೂಚಕಗಳಾಗಿ ಪರಿಗಣಿಸಬಹುದು. ಉದಾಹರಣೆಗೆ, ಜೀವಿಸುವ ಹಕ್ಕಿನಲ್ಲಿ ಪ್ರಸ್ತಾಪವಾಗಿರುವ ಶಿಶುಮರಣ, ಹೆಣ್ಣು ಭ್ರೂಣ ಹತ್ಯೆ, ಐದು ವರ್ಷಪೂರೈಸುವುದರೊಳಗೆ ಸಾಯುವ ಮಕ್ಕಳ ಸಂಖ್ಯೆ, ತಾಯ ಮೊಲೆ ಹಾಲನ್ನು ಶೈಶವದಲ್ಲಿ ಕುಡಿಯುವ ಮಕ್ಕಳ ಸಂಖ್ಯೆ, ಅಂಗವಿಕಲ ಮಕ್ಕಳು, ತಾಯಿಯ ಗರ್ಭದಿಂದಲೇ ಏಡ್ಸ್/ ಹೆಚ್.ಐ.ವಿ. ಸೋಂಕಿನೊಂದಿಗೆ ಹುಟ್ಟಿದ ಮಕ್ಕಳು, ಶೈಶವದಲ್ಲಿ/

ಬಾಲ್ಯಾವಸ್ಥೆಯಲ್ಲಿರುವಾಗ/ ಹದಿಹರೆಯದಲ್ಲಿ ಏಡ್ಸ್/ ಹೆಚ್.ಐ.ವಿ. ಸೋಂಕಿಗೆ ಈಡಾದ ಮಕ್ಕಳ ಸಂಖ್ಯೆ, ರೋಗ ನಿರೋಧಕ ವ್ಯವಸ್ಥೆಯ ಸೇವೆ ಪಡೆದವರ ಸಂಖ್ಯೆ, ಮಕ್ಕಳ ಜನನದ ದಾಖಲೆ, ಶೈಶವದಲ್ಲಿ ವೈದ್ಯಕೀಯ ಸೇವೆ ಪಡೆದ ಮಕ್ಕಳ ಸಂಖ್ಯೆ, ಹೆರಿಗೆ ಸಮಯದಲ್ಲಿ ತರಬೇತಿ ಹೊಂದಿದ ದಾದಿಯರ ಸೇವೆ ಪಡೆದವರ ಸಂಖ್ಯೆ, ಜನನ ಕಾಲದಲ್ಲಿ ಮಗುವಿನ ತೂಕ, ಬೆಳೆದಂತೆ ಸೂಕ್ತವಾದ ಪೌಷ್ಟಿಕ ಆಹಾರದ ಪೂರೈಕೆ ಪಡೆದ ಮಕ್ಕಳ ಸಂಖ್ಯೆ, ಸೈನ್ಯಕ್ಕೆ/ ಭಯೋತ್ಪಾದನೆಗೆ ಬಲವಂತವಾಗಿ ಸೇರಿಸಲ್ಪಟ್ಟ ಮಕ್ಕಳ ಸಂಖ್ಯೆ, ಕಳೆದು ಹೋದ, ಓಡಿಹೋದ, ಮಾರಲ್ಪಟ್ಟ ಮಕ್ಕಳ ಸಂಖ್ಯೆ – ಹೀಗೆ ಪಟ್ಟಿ ಬೆಳೆಸಬಹುದು. ಉಳಿದ ಹಕ್ಕುಗಳಾದ ರಕ್ಷಣೆ, ವಿಕಾಸದ ಹಕ್ಕು ಹಾಗೂ ಭಾಗವಹಿಸುವಿಕೆಯ ಹಕ್ಕುಗಳಿಂದಲೂ ಅಭಿವೃದ್ಧಿ ಸೂಚಕಗಳನ್ನು ಗುರುತಿಸಬಹುದು. ಉದಾಹರಣೆಗೆ, ಶಾಲೆಗೆ ಹೋಗುವ ಮಕ್ಕಳು, ಬಾಲಕಾರ್ಮಿಕರು, ಮಧ್ಯದಲ್ಲೇ ಶಾಲೆ ಬಿಟ್ಟವರು, ಸಾಗಣೆಗೆ ಒಳಗಾದ ಮಕ್ಕಳು, ಶೋಷಣೆಗೆ ಬಿದ್ದ ಮಕ್ಕಳು ಇತ್ಯಾದಿ.

ಈ ವಿಚಾರಗಳಿಗೂ ಅಭಿವೃದ್ಧಿ ಸೂಚ್ಯಂಕಗಳ ನಿರ್ಮಾಣಕ್ಕೂ ಇರುವ ಸಂಬಂಧವನ್ನು ವಿಶ್ಲೇಷಿಸಲು, ಹುಟ್ಟಿದ ನಂತರ ಐದು ವರ್ಷ ಪೂರೈಸುವುದರೊಳಗೆ ಮರಣ ಹೊಂದಿದ ಮಕ್ಕಳ ಸಂಖ್ಯೆಯ ವಿಚರವನ್ನೇ ತೆಗೆದುಕೊಂಡು ನೋಡೋಣ.

ಅಧಿಕೃತವಾಗಿ ವರದಿಯಾಗಿರುವಂತೆ ಭಾರತದಲ್ಲಿ ಜೀವಂತವಾಗಿ ಹುಟ್ಟಿದ ಪ್ರತಿ ಸಾವಿರ ಮಕ್ಕಳಲ್ಲಿ ೭೦ ಮಕ್ಕಳು ತಮ್ಮ ಐದನೇ ವರ್ಷವನ್ನು ಕಾಣುವುದೇ ಇಲ್ಲ. ಹಾಗೆಂದರೇನು?

- ಇಷ್ಟು ಮಾನವ ಶಕ್ತಿಯನ್ನು, ಅಂದರೆ ಮುಂದೆ ಬೆಳೆದು ಬರಬಹುದಾದ ಮಾನವ ಸಂಪನ್ಮೂಲಗಳನ್ನು ಕಳೆದುಕೊಂಡೇ ನಾವು ಅಭಿವೃದ್ಧಿಯ ಸ್ಪರ್ಧೆಯಲ್ಲಿ ಓಡಲು ಹೊರಟಿದ್ದೇವೆ ಎಂದರ್ಥ.
- ಸತ್ತ ಈ ಮಕ್ಕಳ ತಾಯಂದಿರಿಗೆ ಸೂಕ್ತವಾದ ಹೆರಿಗೆ ಪೂರ್ವ ಸೇವೆ, ಪೌಷ್ಟಿಕ ಆಹಾರ ದೊರೆಯಲಿಲ್ಲ. ಹೆರಿಗೆಯ ಸಮಯದಲ್ಲಿ ಅವರಿಗೆ ಸೂಕ್ತವಾದ ವೈದ್ಯಕೀಯ ಸೇವೆ ಸಿಕ್ಕಿಲ್ಲ, ಬೆಳೆದಂತೆ ಮಗುವಿಗೆ ಯಾವುದೇ ರೋಗ ನಿರೋಧಕ ಚುಚ್ಚುಮದ್ದು, ಲಸಿಕೆಗಳು ತಲುಪಿಲ್ಲ. ಆ ಮಗುವಿನ ಕುಟುಂಬ ಮಾಹಿತಿಯನ್ನು ಪಡೆದಿಲ್ಲ, ಮಾಹಿತಿ ತಲುಪಿದರೂ, ಆ ಕುಟುಂಬ ಅಕ್ಷರಸ್ಥರಲ್ಲದಿರಬಹುದು. ಆ ಮಕ್ಕಳು ಹುಟ್ಟು ಸಾವುಗಳ ನಡುವೆ ಹೋರಾಡುತ್ತಿರುವಾಗ ಸರ್ಕಾರ ತನ್ನ ಜವಾಬ್ದಾರಿಯನ್ನು ಸರಿಯಾಗಿ ನಿರ್ವಹಿಸಲಿಲ್ಲ.
- ಸ್ಥಳೀಯ ಸರ್ಕಾರಕ್ಕೆ ಮಕ್ಕಳ ಹುಟ್ಟು – ಮರಣ ಮುಖ್ಯವಲ್ಲ. ಆ ಪ್ರದೇಶದಲ್ಲಿ ಶುದ್ಧವಾದ ಕುಡಿಯುವ ನೀರು ದೊರಕುತ್ತಿಲ್ಲ, ಗ್ರಾಮಾನುಸಾರ ಸರಿಯಾದ ನಿರ್ವಹಣೆಯಾಗಿಲ್ಲ, ಸ್ಥಳೀಯ ವೈದ್ಯಕೀಯ ಕೇಂದ್ರ ನೆಪಕ್ಕೆ ಮಾತ್ರ ಇದೆ. ಆ ಪ್ರದೇಶದಲ್ಲಿ ಪಡಿತರ ವ್ಯವಸ್ಥೆ ಇಲ್ಲದಿರಬಹುದು, ಇದ್ದರೂ ತೀರಾ ಕಳಪೆ ಆಹಾರ ಪದಾರ್ಥಗಳು ಸರಬರಾಜಾಗುತ್ತಿರುವ ಬಗ್ಗೆ ವಿವಿಧ ವರದಿಗಳಿಂದ ತಿಳಿಯಲಾಗಿದೆ.
- ಮಕ್ಕಳು ಸಾಯುತ್ತಿದ್ದರೆ ಹೆದರುವ ಸಮುದಾಯಗಳು ಹೆಚ್ಚು ಹೆಚ್ಚು ಮಕ್ಕಳನ್ನು ಪಡೆಯುವ ನಿರ್ಧಾರ ಮಾಡಬಹುದು.

- ಭಾರತ ದೇಶದ ಮಟ್ಟಿಗೆ ಹೇಳುವುದಾದರೆ ಪರಿಶಿಷ್ಟ ಜಾತಿ/ ವರ್ಗಗಳು, ಬುಡಕಟ್ಟು ಕುಟುಂಬಗಳಲ್ಲಿ ಮಕ್ಕಳು ಸಾಯುವ ಪ್ರಮಾಣ ಹೆಚ್ಚಿರಬಹುದು.
- ಮಕ್ಕಳಿಗೆ ಮತ್ತು ಸಮಾಜಕ್ಕೆ ಬೇಕಾದ ಸರಕು ಸಾಗಿಸಲು ಸರಿಯಾದ ರಸ್ತೆ, ಸಾರಿಗೆ ವ್ಯವಸ್ಥೆ ಇಲ್ಲದಿರಬಹುದು ಮತ್ತು ಮಕ್ಕಳಿಗೋಸ್ಕರ ಅಥವಾ ತೀರಾ ತುರ್ತಾಗಿ ಸಾರಿಗೆ ವ್ಯವಸ್ಥೆ ಬೇಕಾದಾಗ ಅಂತಹ ವ್ಯವಸ್ಥೆ ಸಿಗದಿರಬಹುದು, ಇತ್ಯಾದಿ.

ಮಕ್ಕಳು ಸಾಯುತ್ತಿದ್ದಾರೆಂದರೆ ಈ ಎಲ್ಲ ಕೊರತೆಗಳಿಗೆ ಸಮುದಾಯಗಳು ಈಡಾಗಿ, ಮಕ್ಕಳ ಸಾವಿಗೆ ಕಾರಣವಾಗುತ್ತಿವೆ ಎಂದೂ ಅರ್ಥೈಸಬಹುದು. ಈ ವಿಶ್ಲೇಷಣೆ ನೋಡಿ ಸ್ಥಳೀಯ ಸರ್ಕಾರಗಳು ಆರೋಗ್ಯ, ಶಿಕ್ಷಣಗಳ ಜವಾಬ್ದಾರಿ ಹೊತ್ತವರು ಹೌಹಾರಬಹುದು! ಇದೊಂದು ಉದಾಹರಣೆಯಷ್ಟೇ. ಜೀವಂತವಾಗಿ ಹುಟ್ಟುವ ಒಂದು ಸಾವಿರ ಮಕ್ಕಳಲ್ಲಿ ಐದು ವರ್ಷ ಪೂರೈಸುವುದರೊಳಗಾಗಿ ಸತ್ತು ಹೋಗುವ ಮಕ್ಕಳ ಈ ಸಂಖ್ಯೆ ದೇಶದ ಮಕ್ಕಳು ಆರೋಗ್ಯವಾಗಿದ್ದಾರೆಯೋ – ಇಲ್ಲವೋ/ ದೇಶದ ಒಟ್ಟು ಸ್ಥಿತಿ ಆರೋಗ್ಯವಾಗಿದ್ದಾರೆಯೋ – ಇಲ್ಲವೋ ಎಂದು ಅಂತಾರಾಷ್ಟ್ರೀಯವಾಗಿ ಪರಿಗಣಿಸುವ ಒಂದು ಮುಖ್ಯ ಮಾಪಕವಾಗಿದೆ. ಅದನ್ನು ಆಧಾರವಾಗಿ ಇಟ್ಟುಕೊಂಡು ಪ್ರತಿ ದೇಶವನ್ನು ಶ್ರೇಣೀಕರಿಸುವ ಪ್ರಯತ್ನಗಳು ನಡೆದಿದೆ. ಇದೇ ರೀತಿ ಹುಟ್ಟಿದ ಮೊದಲ ವಾರ, ಮೊದಲ ತಿಂಗಳಲ್ಲಿ ಸಾಯುವ ಮಕ್ಕಳು, ಹೆಣ್ಣು ಭ್ರೂಣ ಹತ್ಯೆ, ಹೆಣ್ಣು ಶಿಶು ಹತ್ಯೆ, ಶಾಲೆಗೆ ಹೋಗದ ಮಕ್ಕಳು, ಬಾಲ್ಯವಿವಾಹಕ್ಕೆ ಈಡಾಗುವ ಮಕ್ಕಳು, ಮಾರಾಟವಾಗಿ ಹೋಗುವ ಮಕ್ಕಳು, ವೇಶ್ಯಾವೃತ್ತಿಗೆ ದೂಡಲ್ಪಟ್ಟ ಮಕ್ಕಳು, ಸ್ಥಿತಿವಂತರ ಮನೆಗೆಲಸದಲ್ಲಿ ಸಿಲುಕಿ ಬಿದ್ದ ಮಕ್ಕಳು ಎಂಬ ವಿಚಾರಗಳನ್ನು ಒಂದಕ್ಕೊಂದರಂತೆ ತಳುಕು ಹಾಕಿ ವಿಶ್ಲೇಷಿಸುವ ಅವಶ್ಯಕತೆ ಇದೆ. ಅಂಥಹ ವಿಶ್ಲೇಷಣೆಯ ಮೂಲಕ ದೇಶ ಅಭಿವೃದ್ಧಿ ಹೊಂದಿದೆಯೋ ಇಲ್ಲವೋ ಎಂದು ಒರೆಗೆ ಹಚ್ಚುವ ಸಾಧನವಾಗಿ ದುಡಿಸಿಕೊಳ್ಳುವ ಕೆಲಸವನ್ನು ಕೇಂದ್ರ, ರಾಜ್ಯ ಮತ್ತು ಸ್ಥಳೀಯ ಸರ್ಕಾರಗಳು ಹಾಗೂ ಸ್ವಯಂಸೇವಾ ಸಂಸ್ಥೆಗಳು ಮಾಡಬೇಕಿದೆ. ಮದ್ದು ಗುಂಡುಗಳ, ರಾಕೆಟ್ಟುಗಳ ಸಂಗ್ರಹ ಎಷ್ಟಿದೆ, ಸೈನ್ಯದ ಗಾತ್ರ ಎಷ್ಟು, ಎಷ್ಟು ಪೆಪ್ಸಿ ಕೋಲಾಗಳು ಮಾರಾಟವಾಯಿತು, ಎಷ್ಟು ಪಿಟ್ಜಾ ಹೋಟೆಲ್‌ಗಳು ಇವೆ, ಜನರ ಬಳಿ ಎಷ್ಟು ಚಪ್ಪಲಿಗಳು – ದಿರಿಸುಗಳು ಇವೆ, ಎಷ್ಟು ಸೌಂದರ್ಯವರ್ಧಕಗಳು ಮಾರಾಟವಾಯಿತು, ಟಿವಿ, ಫ್ರಿಡ್ಜ್‌ಗಳು ಇತ್ಯಾದಿ ಎಷ್ಟಿವೆ, ಎಷ್ಟು ವಿಮಾನ ನಿಲ್ದಾಣಗಳಿವೆ ಎಂಬಂತಹ ಸೋಗಿನ ಮಾತುಕತೆಗಳನ್ನು ಬಿಟ್ಟು, ಮಕ್ಕಳನ್ನು ಕುರಿತಾದ ವಾಸ್ತವಿಕ ಅಂಶಗಳನ್ನು ಗಂಭೀರವಾಗಿ ಪರಿಗಣಿಸಿ ನಾವೆಲ್ಲರೂ ನಮ್ಮ ದಿನ ನಿತ್ಯದ ಮಾತುಕತೆಗಳಲ್ಲಿ ಚರ್ಚಿಸಬೇಕಾದ ಅಗತ್ಯ ಈಗ ಉಂಟಾಗಿದೆ. ಇಂಥ ಆರೋಗ್ಯಕರ ಚರ್ಚೆಯಿಂದ ನಮ್ಮ ಪ್ರದೇಶದ ಮಕ್ಕಳ ಮಾನಸಿಕ, ದೈಹಿಕ, ನೈತಿಕ, ಸಾಂಸ್ಕೃತಿಕ ಆರೋಗ್ಯ ಹೇಗಿದೆ ಎಂಬುದನ್ನು ಅವಲಂಬಿಸಿ, ನಮ್ಮ ಅಭಿವೃದ್ಧಿ ಹೇಗೆ ಆಗುತ್ತಿದೆ ಎಂಬ ಚರ್ಚಾ ಸಂಸ್ಕೃತಿ ಬೆಳೆಸಿ ತಿಳಿದುಕೊಳ್ಳಲು ಮಕ್ಕಳ ಹಕ್ಕುಗಳ ಅರಿವು ನೆರವಾಗುತ್ತದೆ.

ಕೌಟುಂಬಿಕ ಇಲ್ಲವೇ ಸಾಂಸ್ಕೃತಿಕ ಇತ್ಯಾದಿ ಸಭೆಗಳಲ್ಲಿ ಸೇರಿದಾಗ ಜನ ಸಾಮಾನ್ಯವಾಗಿ ಮಾತನಾಡುವುದು/ ಹರಟೆ ಹೊಡೆಯುವುದು, ಚಿತ್ರ ನಟರ ಬದುಕು, ಆಟೋಟಗಳ ಪಟುಗಳು, ರಾಜಕೀಯ,

ಫ್ಯಾಶನ್, ಸಂಪತ್ತು, ಸಂಬಳ ಇತ್ಯಾದಿ ಕುರಿತುಈ ಎಲ್ಲ ಮಾತುಗಳ ನಡುವೆ ಮಳೆ ಬೆಳೆ ಬರಬಹುದು. ತಮ್ಮ ಆರೋಗ್ಯ, ಕುಟುಂಬದ ಲಾಭ ನಷ್ಟ ಬಂದೀತು. ಇವುಗಳ ಜೊತೆ ರಾಷ್ಟ್ರದ ಅಭಿವೃದ್ಧಿ ಗುರಿಗಳನ್ನು ಕುರಿತು ಸ್ವಲ್ಪ ಸಮಯ ನೀಡಲಾದೀತೆ? ಪ್ರಯತ್ನಿಸಬೇಕು. ಉದಾ: ಅಂಗನಾವಾಡಿ, ಶಾಲೆ, ಪ್ರಾಥಮಿಕ ಆರೋಗ್ಯ ಕೇಂದ್ರದ ಸ್ಥಿತಿಗತಿ, ರೋಗ ನಿರೋಧಕ ಲಸಿಕೆ ನೀಡಿರುವುದು, ಶಾಲೆ ಬಿಡುವ ಮಕ್ಕಳು, ಬಾಲ್ಯ ವಿವಾಹ, ಹೆರಿಗೆ ಸಮಯದಲ್ಲಿ ಸಾಯುವ ತಾಯಂದಿರು, ಓಡಿ ಹೋಗುವ ಮಕ್ಕಳು, ಭಿಕ್ಷೆ ಬೇಡುವ ಮಕ್ಕಳು, ದೇವದಾಸಿ ಪದ್ಧತಿ, ನೀರು ಹಾಗೂ ಮೇವಿನ ಕೊರತೆಯಿಂದಾಗಿ ಜನ ವಲಸೆ ಹೋದಾಗ ಅವರೆದುರಿಸುವ ಪರಿಸ್ಥಿತಿಗಳು, ಅತೀ ಕಡಿಮೆ ಕೂಲಿ ಕೊಟ್ಟು ಜನರಿಂದ ಕೆಲಸ ಮಾಡಿಸಿಕೊಂಡಾಗ ಜನರಿಗಾಗುವ ಅನ್ಯಾಯ ಇತ್ಯಾದಿ, ಕುರಿತು ಮಾತನಾಡುವುದು ಸಹಜವಾಗಬೇಕು.

**ಸಹಸ್ರಮಾನದ ಜಾಗತಿಕ ಅಭಿವೃದ್ಧಿ ಗುರಿಗಳು:**

ವಿಶ್ವಸಂಸ್ಥೆಯು ೨೦೦೦ ಸೆಪ್ಟೆಂಬರ್ ೬ – ೮ರಂದು ನಡೆಸಿದ ಸಾಮಾನ್ಯ ಸಭೆಯಲ್ಲಿ ಜಗತ್ತಿನೆದುರು ೨೦೧೫ರೊಳಗೆ ಸಾಧಿಸಲೇಬೇಕೆಂದು ಎಂಟು ಪ್ರಮುಖ ಧ್ಯೇಯಗಳನ್ನೊಳಗೊಂಡ ಅಭಿವೃದ್ಧಿ ಗುರಿಗಳನ್ನು ಇಟ್ಟಿತು. ಇದೇ ಎಂ.ಡಿ.ಜಿ.ಗಳು.

ಸಹಸ್ರಮಾನದ ಜಾಗತಿಕ ಅಭಿವೃದ್ಧಿ ಗುರಿಗಳು ಅತ್ಯುತ್ತಮವಾದ ಗುರಿಗಳನ್ನು ಜಾಗತಿಕ ಮಟ್ಟದಲ್ಲಿ ಎದುರಿಟ್ಟರೂ, ಹಲವಾರು ಕ್ಷೇತ್ರಗಳಲ್ಲಿ ಈ ಗುರಿಗಳು ಅಷ್ಟು ಸಮರ್ಪಕವಾಗಿಲ್ಲ ಮತ್ತು ಉತ್ತಮವಾಗಿಲ್ಲ ಎಂಬುದು ಅನೇಕರ ದೃಷ್ಟಿಕೋನವಾಗಿದೆ. ಹೀಗಾಗಿ, ಸಹಸ್ರಮಾನದ ಅಭಿವೃದ್ಧಿ ಗುರಿಗಳು ಟೀಕೆಗೂ ಗುರಿಯಾಗಿವೆ.

ಈ ಜಾಗತಿಕ ಗುರಿಗಳನ್ನು ಸಾಧಿಸಿದ್ದೇ ಆದಲ್ಲಿ ಯಾರೂ ಬಡತನದ ಬೇಗೆಗೆ ಬಲಿಯಾಗಬೇಕಿಲ್ಲ, ರೋಗಗಳಿಂದ ಬಳಲಬೇಕಿಲ್ಲ ಮತ್ತು ದಬ್ಬಾಳಿಕೆಗೆ ಗುರಿಯಾಗುವುದಿಲ್ಲ. ಇವನ್ನೆಲ್ಲಾ ಮುಟ್ಟಲು ಕೇವಲ ನೈತಿಕ ಬೆಂಬಲವಿದ್ದರೆ ಸಾಲದು, ಆರ್ಥಿಕ ಸಬಲತೆ, ಬೆಂಬಲವೂ ಬೇಕಿದೆ. ೨೦೦೦ದಲ್ಲಿ ನ್ಯೂಯಾರ್ಕ್ ನಗರದ ವಿಶ್ವಸಂಸ್ಥೆಯ ಸಭಾಂಗಣದಲ್ಲಿ ಸೇರಿದ್ದ ನೂರಾರು ಪ್ರಧಾನಿಗಳು, ರಾಷ್ಟ್ರಪತಿಗಳು, ಅಧ್ಯಕ್ಷರು, ಪರಸ್ಪರ ಆರ್ಥಿಕ, ತಾಂತ್ರಿಕ, ಬೌದ್ಧಿಕ ಸಹಕಾರ ಘೋಷಿಸಿದ್ದರು. ೨೦೧೫ರೊಳಗೆ ಜಗತ್ತು ಹೊಸ ಹೆಜ್ಜೆ ಹಾಕುವುದೆಂದು ಕನಸು ಕಟ್ಟಿದ್ದರು. ಇತ್ತೀಚೆಗೆ ಈ ಸಹಸ್ರಮಾನದ ಜಾಗತಿಕ ಗುರಿಗಳ ಮಧ್ಯಂತರ ವಿಶ್ಲೇಷಣೆ ನಡೆಯಿತು. 'ಜಗತ್ತಿನ ಯಾವ ಭಾಗದಲ್ಲೂ ಈ ಸಾಧನೆ ಅರ್ಧದಷ್ಟೂ ಆಗಿಲ್ಲ. ಇದಕ್ಕೆ ದೊಡ್ಡ ಕಾರಣ ಆರ್ಥಿಕ ಬೆಂಬಲ ನೀಡುವ ಪಣ ತೊಟ್ಟಿದ್ದ ಅಮೆರಿಕಾ, ಫ್ರಾನ್ಸ್, ಇಂಗ್ಲೆಂಡ್, ಆಸ್ಟ್ರೇಲಿಯಾದಂತಹ ರಾಷ್ಟ್ರಗಳು ನಿರೀಕ್ಷಿಸಿದಷ್ಟು ನೆರವಿನ ಹಣವನ್ನು ಅಭಿವೃದ್ಧಿ ಹೊಂದುತ್ತಿರುವ ಬಡರಾಷ್ಟ್ರಗಳಿಗೆ ನೀಡಿಲ್ಲ. ೨೦೦೫ರಲ್ಲಿ ೧೦೭.೧ ಬಿಲಿಯನ್ ಡಾಲರ್ ಇದ್ದ ನೆರವು, ೨೦೦೭ರಲ್ಲಿ ೧೦೩.೭ ಬಿಲಿಯನ್ ಡಾಲರ್‌ಗಳಿಗೆ ಇಳಿದಿದೆ. 'ನಮ್ಮ ನಮ್ಮ ದೇಶದಲ್ಲೇ ಆರ್ಥಿಕ ಕುಂಠಿತ ಪರಿಸ್ಥಿತಿ ಇದೆ, ನಾವು ಹೇಗೆ ಬೇರೆಯವರಿಗೆ ಹಣ ನೀಡುವುದು?' ಎಂಬ ಸ್ವಾಭಾವಿಕ ಅನುಮಾನಗಳು ವ್ಯಕ್ತವಾಗಿದೆ. ಎಂ.ಡಿ.ಜಿ. ಒಂದು ದಾಖಲೆಯಷ್ಟೇ ಎಂಬಂತಾಗುತ್ತಿದೆ.

**ನಮ್ಮ ಮಕ್ಕಳು ನಮ್ಮ ಪ್ರಗತಿ:**

ಮಕ್ಕಳ ಹಕ್ಕುಗಳನ್ನು ಎತ್ತಿ ಹಿಡಿಯಲು ಹಾಗೂ ಮಕ್ಕಳ ರಕ್ಷಣೆಯನ್ನು ಖಾತ್ರಿಗೊಳಿಸಲು ಗ್ರಾಮ ಪಂಚಾಯಿತ್ತಿಗಳಿಂದ ಮಕ್ಕಳ ಸಮಗ್ರ ಅನುಸರಣೆ ವ್ಯವಸ್ಥೆ.

ಪ್ರಸ್ತುತ ಯಾವುದೇ ದೇಶದ ಅಭಿವೃದ್ದಿಯನ್ನು ಅಲ್ಲಿಯ "ಮಕ್ಕಳ ಸ್ಥಿತಿ"ಯ ಮೇಲೆ ನಿರ್ಧರಿಸುತ್ತಾರೆ. ೫ ವರ್ಷದೊಳಗಿನ ಮಕ್ಕಳ ಮರಣ ಪ್ರಮಾಣವನ್ನು ದೇಶ ಮುಂದುವರೆಯುತ್ತಿದೆಯೇ ಅಥವಾ ಇಲ್ಲವೇ ಎಂಬುವುದನ್ನು ನಿರ್ಧರಿಸಲು ಮೂಲ ಅಭಿವೃದ್ಧಿ ಸೂಚಕವನ್ನಾಗಿ ಪರಿಗಣಿಸುತ್ತಾರೆ. ಇನ್ನಿತರ ಕೆಲವು ಅಭಿವೃದ್ಧಿ ಸೂಚಕಗಳು: ಶಿಶು ಮರಣ ಪ್ರಮಾಣ, ಲಿಂಗ ಪ್ರಮಾಣ, ಇತ್ಯಾದಿ.

ಮಕ್ಕಳ ಹಕ್ಕುಗಳ ಒಡಂಬಡಿಕೆ ಹಿನ್ನಲೆಯಲ್ಲಿ ಅಭಿವೃದ್ಧಿ ಸೂಚ್ಯಂಕಗಳನ್ನು ಗುರುತಿಸುವ ಹಲವು ಪ್ರಯತ್ನಗಳು ಆಗಿವೆ. ಈ ಪ್ರಯತ್ನಗಳಲ್ಲಿ ಕಂಡುಬಂದಿರುವುದು ಮಕ್ಕಳ ಕುರಿತು ಅಂಕಿ ಅಂಶಗಳು ರಾಷ್ಟ್ರ ಮತ್ತು ರಾಜ್ಯ ಮಟ್ಟದಲ್ಲಿರುತ್ತದೆ. ಜಿಲ್ಲಾ ಮಟ್ಟದಲ್ಲಿ ಕೆಲವೊಂದು ಮಾಹಿತಿಗಳು ಮಾತ್ರ ಲಭ್ಯವಿರುತ್ತದೆ. ಹಲವಾರು ಭಾರಿ ಈ ಅಂಕಿ ಅಂಶಗಳು ತೀರಾ ಹಳೆಯದಾಗಿದ್ದು(ಕೆಲವೊಮ್ಮೆ ಹತ್ತು ವರ್ಷ ಹಳೆಯವು) ಯಾವುದೇ ಸಮುದಾಯದ ಮಕ್ಕಳ ಪ್ರಸ್ತುತ ಸ್ಥಿತಿಯ ಬಗ್ಗೆ ನಿಖರ ಚಿತ್ರಣವನ್ನು ಕೊಡುವುದಿಲ್ಲ. ಇದು ಮಕ್ಕಳ ಉಳಿವು, ರಕ್ಷಣೆ, ಅಭಿವೃದ್ಧಿ ಮತ್ತು ಭಾಗವಹಿಸುವಿಕೆಯ ಹಕ್ಕುಗಳನ್ನು ಎತ್ತಿ ಹಿಡಿಯಲು ಸೂಕ್ತವಾದ ಯೋಜನೆಗಳನ್ನು ರೂಪಿಸುವಲ್ಲಿ ದೊಡ್ಡ ತೊಡಕಾಗಿದೆ.

ಅಭಿವೃದ್ಧಿ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡಿರುವ ಸಂಸ್ಥೆಗಳ ಕಾರ್ಯಕರ್ತರು ಪ್ರಸ್ತುತ ಸಮಯದ ಮಕ್ಕಳ ಮಾಹಿತಿಗಳನ್ನು ತಿಳಿದುಕೊಳ್ಳಲು ಹಲವಾರು ಭಾರಿ ಪ್ರಯತ್ನ ಪಟ್ಟಿದ್ದಾರೆ. ಆದರೆ ಈ ರೀತಿಯ ಪ್ರಸ್ತುತ ಸಮಯದ ಮಾಹಿತಿಗಳು ರಾಜ್ಯ, ಜಿಲ್ಲೆ ಹಾಗೂ ತಾಲ್ಲೂಕು ಮಟ್ಟದಲ್ಲಿಯು ಲಭ್ಯವಿಲ್ಲದಿರುವುದು ವಾಸ್ತವ. ಅತೀ ಹೆಚ್ಚಿ ಅಚ್ಚರಿ ಹುಟ್ಟಿಸುವ ವಿಷಯವೆಂದರೆ ಈ ರೀತಿಯ ಮಾಹಿತಿಗಳು ವಾರ್ಡ್ ಅಥವಾ ಪಂಚಾಯಿತಿ ಮಟ್ಟದಲ್ಲಿಯೂ ಲಭ್ಯವಿಲ್ಲದಿರುವುದ. ಏಕೆಂದರೆ ಸ್ಥಳೀಯ ಮಟ್ಟದಲ್ಲಿ ಮಾಹಿತಿಯನ್ನು ಸಂಗ್ರಹಿಸಿ ಹಾಗೂ ಕ್ರೋಡೀಕರಿಸಲು ಯಾವುದೇ ವಿಧಾನಗಳಿಲ್ಲ.

ಮಾಹಿತಿಯೇ ಅಭಿವೃದ್ಧಿಯ ಮೂಲ ಮಂತ್ರ ಎಂದು ನಾವೆಲ್ಲರೂ ಒಪ್ಪುವ ವಿಚಾರ. ಹೀಗಾಗಿ, ಮಕ್ಕಳ ಅಭಿವೃದ್ಧಿ, ಬೆಳವಣಿಗೆ ಅಥವಾ ವಿಗತಿಯ ಸಂಚಾರವೆ ಮೊದಲಾದ ವಿಚಾರಗಳನ್ನು ಪತ್ತೆ ಹಚ್ಚುವ ತಂತ್ರಜ್ಞಾನದ ಅವಶ್ಯಕತೆ ಕಂಡುಕೊಂಡಿರುವ ಚೈಲ್ಡ್ ರೈಟ್ಸ್ ಟ್ರಸ್ಟ್, ಎವೆರಿ ಚೈಲ್ಡ್ ಹಾಗೂ ಮೂ ಟು ವಾಯ್ಸ್ ಸಂಸ್ಥೆಗಳು ಜೊತೆಗೂಡಿ "ನಮ್ಮ ಮಕ್ಕಳು ನಮ್ಮ ಪ್ರಗತಿ" ಎಂಬ ಕಂಪ್ಯೂಟರ್, ದೂರವಾಣಿ ಹಾಗೂ ಇಂಟರ್‌ನೆಟ್ ಆಧಾರಿತ ತಂತ್ರಜ್ಞಾನವನ್ನು ಅಭಿವೃದ್ಧಿ ಪಡಿಸಿದ್ದಾರೆ. ವಾರ್ಡ್ ಮಟ್ಟದಲ್ಲಿ ಪ್ರತಿಯೊಂದು ಮಗುವಿನ ಮಾಹಿತಿ ಸಂಗ್ರಹಿಸಿ ಆಯಾ ವಾರ್ಡ್, ಪಂಚಾಯಿತ್ತಿ ಮಟ್ಟದಲ್ಲಿ ಮಕ್ಕಳಿಗಾಗಿ ಎಂತಹ ಕಾರ್ಯಕ್ರಮಗಳು ಕಾರ್ಯಕ್ರಮಗಳು ಹಾಗೂ ಯೋಜನೆಗಳನ್ನು ನೆಲೆಸಬೇಕೆಂದು ಇಲ್ಲಿನ ಮಾಹಿತಿ ಮತ್ತು ಅದನ್ನು ಆಧರಿಸಿ ಸಿದ್ಧ ಮಾಡುವ ವರದಿಗಳು ಸಹಾಯ ಮಾಡುತ್ತವೆ.

**ಮಕ್ಕಳ ಹಕ್ಕುಗಳ ಹಿನ್ನಲೆ:**

ಮಾನವ ಹಕ್ಕುಗಳ ಬಗ್ಗೆ ಚಿಂತನೆ ಆರಂಭವಾದದ್ದು ೧೭೮೯ರಲ್ಲಿ. ಫ್ರಾನ್ಸಿನಲ್ಲಿ 'ನಾಗರಿಕ ಹಕ್ಕು' ಘೋಷಣೆ ಹೊರಬಂದ ಸಂದರ್ಭದಲ್ಲೂ ಮಕ್ಕಳನ್ನು ಪೋಷಕರ ಆಸ್ತಿ ಎಂದೇ ಪರಿಗಣಿಸಲಾಗಿತ್ತು. ೨೦ನೇ ಶತಮಾನದ ಆರಂಭದಲ್ಲೂ ಮಕ್ಕಳ ಬಗ್ಗೆ ಅಂತಾರಾಷ್ಟ್ರೀಯ ಮಟ್ಟದಲ್ಲಿ ಯಾವುದೇ ಸೂಕ್ತ ನಿಲುವುಗಳು ಇರಲಿಲ್ಲ. 'ಮಕ್ಕಳು ಅವರವರ ಕುಟುಂಬದ ಅಂಕೆಯಲ್ಲಿರಬೇಕು. ಕುಟುಂಬದ ನಿರ್ದೇಶನದಂತೆ ನಡೆಯಬೇಕು. ಮಕ್ಕಳ ಯೋಗ ಕ್ಷೇಮದ ಸಂಪೂರ್ಣ ಜವಾಬ್ದಾರಿ ಕುಟುಂಬದ್ದೇ' ಎಂಬುದು ಸಮುದಾಯಗಳಲ್ಲಿ ಆಗ ಇದ್ದ ನಿಲುವು. ಇಂತಹ ನಿಲುವುಗಳ ಬದಲಾವಣೆಗೆ ನಾಗರೀಕ ಸಮಾಜ ಮೊದಲನೇ ಜಾಗತಿಕ ಯುದ್ಧ (೧೯೧೪-೧೮) ಆಗುವ ತನಕ ಕಾಯಬೇಕಾಯಿತು.

'ಸೇವ್ ದ ಚಿಲ್ಡ್ರನ್ ಫಂಡ್' ಎಂಬ ಅಂತಾರಾಷ್ಟ್ರೀಯ ಸೇವಾ ಸಂಸ್ಥೆ ೧೯೧೯ರಲ್ಲಿ ಬ್ರಿಟನ್ ಮತ್ತು ಸ್ವೀಡನ್ನಲ್ಲಿ ಶ್ರೀಮತಿ ಎಗ್ಲಾಂಟೈನ್ ಜೆಬ್ ಎಮಬುವವರ ಪ್ರಯತ್ನದೊಂದಾಗಿ ಆರಂಭವಾಯಿತು. ಈ ಎರಡೂ ದೇಶಗಳಲ್ಲಿರುವ ಎಸ್.ಸಿ.ಎಫ್ ಶಾಖೆಗಳ ಒಕ್ಕೂಟದ ಒತ್ತಾಸೆಯಿಂದ 'ಮಕ್ಕಳ ಹಕ್ಕುಗಳ ಸನ್ನದು' ರಚಿತವಾಯಿತು. ಅಂದಿನ ರಾಷ್ಟ್ರಗಳ ಒಕ್ಕೂಟ ೧೯೨೪ ಸೆಪ್ಟೆಂಬರ್ ೨೬ರಂದು ಈ ಸನ್ನದನ್ನು ಒಪ್ಪಿಕೊಂಡಿತು. ಅದರಲ್ಲಿ ಐದು ಪ್ರಮುಖ ವಿಚಾರಗಳಿದ್ದವು:

೧) ಪ್ರತಿ ಮಗುವಿನ ದೈಹಿಕ ಮತ್ತು ಆಧ್ಯಾತ್ಮಿಕ ಬೆಳವಣಿಗೆಗೆ ಅವಕಾಶವಿರಬೇಕು.

೨) ಹಸುವಿನಿಂದ ಬಳಲುವ ಮಗುವಿಗೆ ಆಹಾರ, ಅನಾರೋಗ್ಯಗೊಂಡ ಮಗುವಿಗೆ ಚಿಕಿತ್ಸೆ, ಹಿಂದುಳಿದ ಮಗುವಿಗೆ ಸಹಾಯ ನೀಡಬೇಕು. ತಪ್ಪು ಮಾಡಿದ ಮಕ್ಕಳನ್ನು ಸನ್ಮಾರ್ಗಕ್ಕೆ ತರಬೇಕು. ತಿರಸ್ಕೃತ ಅಥವಾ ಅನಾಥ ಮಕ್ಕಳಿಗೆ ರಕ್ಷಣೆ ನೀಡಬೇಕು.

೩) ನೈಸರ್ಗಿಕ ದುರಂತಗಳು ಅಥವಾ ಯುದ್ಧ ಸಂಭವಿಸಿದಾಗ ಎಲ್ಲರಿಗಿಂತ ಮೊದಲು ಮಕ್ಕಳಿಗೆ ರಕ್ಷಣೆ ನೀಡಬೇಕು.

೪) ಮಕ್ಕಳನ್ನು ಎಲ್ಲಾ ರೀತಿಯ ಶೋಷಣೆಗಳಿಂದ ರಕ್ಷಿಸಬೇಕು, ಎಲ್ಲಾ ಮಕ್ಕಳಿಗೂ ರಕ್ಷಣೆ ದೊರಕಬೇಕು. ಎಲ್ಲಾ ಮಕ್ಕಳಿಗೂ ಶಿಕ್ಷಣ ದೊರಕಬೇಕು.

೫) ಪ್ರತಿಯೊಂದು ಮಗುವು ತನ್ನ ಬುದ್ಧಿ ಶಕ್ತಿ, ಕೌಶಲ್ಯಗಳನ್ನು ತನ್ನ ಸಹವರ್ತಿಗಳ ಶ್ರೇಯೋಭಿವೃದ್ಧಿಗಾಗಿ ಬಳಸಬೇಕೆಂಬ ಪ್ರಜ್ಞೆಯೊಡನೆ ಬೆಳೆಯಬೇಕು.

೧೯೪೮ ರಲ್ಲಿ ಘೋಷಿತವಾದ 'ಮಾನವ ಹಕ್ಕು'ಗಳಲ್ಲಿ ಮಕ್ಕಳಿಗೂ ಹಕ್ಕುಗಳಿವೆ ಎಂದು ಗುರುತಿಸಲಾಗಿದೆ. ೧೯೫೯ ನವೆಂಬರ್ ೨೦ ರಂದು ವಿಶ್ವಸಂಸ್ಥೆಯ ಮಹಾಸಭೆ ಮಕ್ಕಳ ಹಕ್ಕುಗಳನ್ನು ಅಂಗೀಕರಿಸಿತು. 'ಪ್ರತಿಯೊಂದು ಮಗುವಿಗೂ ಅತ್ಯುತ್ತಮವಾದ ವ್ಯವಸ್ಥೆಗಳು ಮತ್ತು ಸೌಲಭ್ಯಗಳು ಹಾಗೂ ಬದುಕನ್ನು ನೀಡಬೇಕಾದುದು ಮನುಕುಲದ ಕರ್ತವ್ಯ' ಎಂಬ ವಿಚಾರವನ್ನು ಇಲ್ಲಿ ಎತ್ತಿ ಹಿಡಿಯಲಾಯಿತು.

೯೨೪ ರಲ್ಲಿ ನೀಡಲಾಗಿದ್ದ ಐದು ಅಂಶಗಳನ್ನು ಇಲ್ಲಿ ವಿಶದೀಕರಿಸಲಾಗಿದೆ. ಅವುಗಳಲ್ಲಿ ಪ್ರಮುಖವಾದುದು ಈ ಮುಂದಿನಂತಿದೆ.

- ಯಾವುದೇ ಮಗು ತಾರತಮ್ಯಕ್ಕೆ ಈಡಾಗಬಾರದು.
- ಗೌರವಯುತ ಬಾಳು ಮಕ್ಕಳಿಗೆ ಸಿಗಬೇಕು.
- ಸ್ವತಂತ್ರವಾಗಿ ವಿಕಾಸ ಹೊಂದುವ ಅವಕಾಶ ಮಕ್ಕಳಿಗಿರಬೇಕು.
- ಒಂದು ಹೆಸರು ಮತ್ತು ರಾಷ್ಟ್ರೀಯತೆ ಮಕ್ಕಳಿಗೆ ಬೇಕು.
- ಮಕ್ಕಳಿಗೆ ಸಾಮಾಜಿಕ ಭದ್ರತೆ ದೊರಕಬೇಕು.
- ಪ್ರೀತಿ ತೋರುವ ಮತ್ತು ಅರ್ಥ ಮಾಡಿಕೊಳ್ಳುವ ಆಪ್ತರು ಮಕ್ಕಳಿಗೆ ಇರಬೇಕು.
- ಶಿಕ್ಷಣ, ಮನೋರಂಜನೆ ಮಕ್ಕಳಿಗೆ ಇರಬೇಕು.
- ದುರಂತ ಸಂಭವಿಸಿದಲ್ಲಿ ಮಕ್ಕಳಿಗೆ ಪ್ರಥಮ ಆದ್ಯತೆಯ ಮೇರೆಗೆ ರಕ್ಷಣೆ ಮತ್ತು ಪುನರ್ವಸತಿ ಸಿಗಬೇಕು.
- ನಿರ್ಲಕ್ಷ್ಯ, ಹಿಂಸೆ ಅಥವಾ ಶೋಷಣೆಯ ವಿರುದ್ಧ ಮಕ್ಕಳಿಗೆ ರಕ್ಷಣೆ ಸಿಗಬೇಕು.

ಇವೆಲ್ಲವನ್ನೂ ವಿಶ್ವಸಂಸ್ಥೆಯ ಸದಸ್ಯ ರಾಷ್ಟ್ರಗಳು ಒಪ್ಪಿ ಜಾರಿಗೆ ತರಬೇಕೆಂದು ಬಯಸಲಾಗಿತ್ತೇ ಹೊರತು 'ಇವುಗಳನ್ನು ಜಾರಿಗೆ ತರಲು ತಪ್ಪಕೂಡದು ಎಂಬ ಒತ್ತಾಯಪೂರ್ವಕ ಆಗ್ರಹ' ಇರಲಿಲ್ಲ. ಈ ಹಿನ್ನಲೆಯಲ್ಲಿ, ೧೯೮೯ರಲ್ಲಿ ಜಾರಿಗೆ ಬಂದ 'ಮಕ್ಕಳ ಹಕ್ಕುಗಳ ಒಂಡಂಬಡಿಕೆ' ಒಂದು ಧೃಢವಾದ ಕಾನೂನು. ಒಂಡಂಬಡಿಕೆಯನ್ನು ಒಪ್ಪಿ ಅನುಸರಿಸುವ ರಾಷ್ಟ್ರಗಳ ಜವಬ್ದಾರಿ, ಮಿತಿಗಳು ಮತ್ತು ಜಾರಿ ಮಾಡದಿದ್ದಲ್ಲಿ ತೆಗೆದುಕೊಳ್ಳಬೇಕಾದ ಕ್ರಮಗಳು ಮೊದಲಾದವುಗಳ ಬಗ್ಗೆ ಕಾನೂನಿನ ಸ್ವರೂಪದಲ್ಲಿ ಅಡಕ ಮಾಡಿರುವುದು ಈ ಒಂಡಂಬಡಿಕೆಯ ವಿಶೇಷ. ಸದ್ಯ ಚಾಲ್ತಿಯಲ್ಲಿರುವ ಯಾವುದೇ ಕಾನೂನು, ಹಕ್ಕುಗಳಿಗಿಂತ ಇನ್ನೂ ಉತ್ತಮವಾದ ಆದರ್ಶಗಳು ಮತ್ತು ವ್ಯವಸ್ಥೆಗಳು ಮಕ್ಕಳಿಗಾಗಿ ಇರಬೇಕು.

**ಮಕ್ಕಳ ಹಕ್ಕುಗಳ ಮಾತೆ ಎಗ್ಲಾಂಟೈನ್ ಜೆಬ್:**

ಇಂಗ್ಲೆಂಡಿನಲ್ಲಿ ೧೮೭೬ರಲ್ಲಿ ಜನಿಸಿದ ಎಗ್ಲಾಂಟೈನ್ ಜೆಬ್ ಸದಕಾಲ ಸಾಮಾಜಿಕ ಸುಧಾರಣೆಯ ಬಗ್ಗೆಯೇ ಚಿಂತಿಸುತ್ತಿದ್ದರು. ಆಕ್ಸಫರ್ಡ್‌ನಲ್ಲಿ ಚರಿತ್ರೆಯನ್ನು ಅಧ್ಯಯನ ಮಾಡಿದ ಜೆಬ್, ಶಿಕ್ಷಕಿಯಾಗಿ ಪ್ರಾಥಮಿಕ ಶಾಲೆಗಳಲ್ಲಿ ಮಕ್ಕಳೊಡನೆ ಮಾರ್ಲ್‌ಬರೋನಲ್ಲಿ ಕೆಲಸ ಮಾಡಿದರು. ಕೇಂಬ್ರಿಡ್ಜ್ ನಲ್ಲಿ ತಾಯಿಯೊಡನೆ ನೆಲೆನಿಂತ ಜೆಬ್ ಸಾಮಾಜಿಕ ಸೇವೆಗಳಲ್ಲಿ ನಿರತವಾಗಿದ್ದ ಸಂಸ್ಥೆಯೊಡನೆ ಸೇರಿದರು. ಸಮಾಜ ಸೇವೆಯೆಂದರೆ ಕೇವಲ ಹಣವಿದ್ದವರು ಮಾಡುವ ದಾನಧರ್ಮವಲ್ಲ, ಬದಲಿಗೆ ಸಮಾಜ ಸೇವೆಯಲ್ಲಿ ನಿರ್ದಿಷ್ಟವಾದ ವಿಧಿವಿಧಾನಗಳೊಂದಿಗೆ ಆಡಳಿತ ನಿರ್ವಹಣೆ ಮಾಡಬೇಕನ್ನುವ ವಿಚಾರವನ್ನು ಇಲ್ಲಿ ಆಕೆ ಪ್ರತಿಪಾದಿಸಿದರು. ಜೆಬ್ ಬಗ್ಗೆ ಅವರ ಸೋದರಿ ಡೋರೋತಿ ಬಕ್ಸ್‌ಟನ್ ಹೇಳಿರುವ ಮಾತು ಗಮನಾರ್ಹ, 'ಸಮಾಜಕ್ಕೆ ಏನಾದರೊಂದು

ಳಿತು ಮಾಡಲೇಬೇಕು ಎನ್ನುವ ಜೆಬ್‌ನಳ ಹಂಬಲ, ಅವಳನ್ನು ಎಂದಿಗೂ ನೆಮ್ಮದಿಯಿಂದ ಇರಲು ಬಿಡುತ್ತಲೇ ರಲಿಲ್ಲ'.

ಯುದ್ಧದ ಭಯಾನಕತೆಯ ಅರಿವು ಜೆಬ್‌ಗೆ ಮೊದಲು ಆದದ್ದು ೧೯೧೨ರಲ್ಲಿ ಬಾಲ್ಕನ್ ಪರಿಹಾರ ಧಿಗಾಗಿ ಕೆಲಸ ಮಾಡಿದಾಗ. ೧೯೧೩ರಲ್ಲಿ ತನ್ನ ೩೭ನೇ ವಯಸ್ಸಿನಲ್ಲಿ ಮೆಸಡೋನಿಯನ್ನೆ ತೆರಳಿ ಅಲ್ಲಿ ಡೆಯುತ್ತಿದ್ದ ಪರಿಹಾರ ಕಾರ್ಯಗಳನ್ನು ತಿಳಿಯಲು ಹೋಗಿದ್ದ ಎಗ್ಲಾಂಟೈನ್, ಮೊದಲ ಮಹಾಯುದ್ಧದ ಂದರ್ಭದಲ್ಲಿ ಹಿಂದಿರುಗಿದರು. ಯುದ್ಧದ ಕಾಲದಲ್ಲಿ ಯೂರೋಪಿನ ವಿವಿಧ ಭಾಗಗಳಿಗೆ ಪರಿಹಾರ ಾಮಾಗ್ರಿಗಳನ್ನು ಕಳಹಿಸಲು 'ಆಲೈಡ್(ಸಂಯುಕ್ತ ಪಡೆ)' ಸೈನಿಕರು ತಡೆ ಒಡ್ಡಿ ಮಕ್ಕಳು, ಮಹಿಳೆಯರನ್ನೂ ಒಳಗೊಂಡಂತೆ ಸಾವಿರಾರು ಜನರು ತೊಂದರೆ ಅನುಭವಿಸುವುದನ್ನು ಕಂಡ ಎಗ್ಲಾಂಟೈನ್ ಕುಪಿತರಾಗಿದ್ದರು. ಎಗ್ಲಾಂಟೈನ್ ಮತ್ತು ಡೋರೋತಿ ಜೊತೆಗೂಡಿ ಯುರೋಪಿನ ಸರಕಾರಗಳ ಮೇಲೆ ಒತ್ತಡ ಹಾಕಿ ಜನರಿಗೆ ಲುಪಬೇಕಾದ ಸಾಮಾಗ್ರಿಗಳು ಸಮಗ್ರವಾಗಿ ಸಿಗುವಂತೆ ೧೯೧೯ರಲ್ಲಿ ನೋಡಿಕೊಂಡರು. ಇಷ್ಟೇ ಅಲ್ಲದೇ ಲೀಗ್ ಆಫ್ ನೇಷನ್ ಸ್ಥಾಪನೆಗೂ ಇವರೇ ಕಾರಣಕರ್ತರಾದರು.

ಯುದ್ಧಗಳಿಂದ ಜರ್ಜರಿತವಾದ ಯೂರೋಪಿನ ರಾಷ್ಟ್ರಗಳ ಸಂಕಷ್ಟದಲ್ಲಿದ್ದ ಮಕ್ಕಳಿಗೆ (ಅದರಲ್ಲೂ ಪ್ರಮುಖವಾಗಿ ಜರ್ಮನಿ ಮತ್ತು ಆಸ್ಟ್ರೀಯಾ ಸಮುದಾಯಗಳ ಮಕ್ಕಳಿಗೆ) ಆಹಾರ, ಔಷಧಿಗಳನ್ನು ಒದಗಿಸಲು ಧನ ಸಂಗ್ರಹಿಸಲೆಂದೇ ಸೇವ್ ದ ಚಿಲ್ಡ್ರನ್ ಫಂಡ್ ಅನ್ನು ಎಗ್ಲಾಂಟೈನ್ ಜೆಬ್ ೧೫ ಏಪ್ರಿಲ್ ೧೯೧೯ರಲ್ಲಿ ಆರಂಭಿಸಿದರು. ಸಂಸ್ಥೆ ಎದುರಿಟ್ಟ ಉದ್ದೇಶವನ್ನು ಬೆಂಬಲಿಸಲು ಜನ ಉದಾರವಾಗಿ ಕೊಡುಗೆಗಳನ್ನು ನೀಡಿದರು. ಕೇವಲ ಮೂರ್‍ನಾಲ್ಕು ವರ್ಷಗಳಲ್ಲಿ ಯುನೈಟೆಡ್ ಕಿಂಗ್‌ಡಂನಲ್ಲಿ ಸೇವ್ ದ ಚಿಲ್ಡ್ರನ್ ಫಂಡ್ ಸಂಸ್ಥೆಯು ಅತ್ಯಂತ ವಿಶ್ವಾಸಾರ್ಹವೂ, ವೃತ್ತಿಶೀಲ ವಿಧಾನಗಳಿಂದ ನಡೆಸುವ ಹಾಗೂ ಅತ್ಯಂತ ಕಡಿಮೆ ಖರ್ಚು ಮಾಡುವ ಸಹಾಯ ಸಂಸ್ಥೆಯೆಂಬ ಗೌರವಕ್ಕೆ ಪಾತ್ರವಾಯಿತು. ನೊಂದವರಿಗೆ ಸಹಾಯ ಒದಗಿಸುವ ಉದ್ದೇಶದಿಂದಲೇ ನಿಧಿ ಸಂಗ್ರಹಿಸಲಿಕ್ಕಾಗಿ ಸಂಸ್ಥೆ ಹಲವಾರು ಪರಿಣಾಮಕಾರಿ ಜಾಹೀರಾತುಗಳು ಹಾಗೂ ಪ್ರಚಾರ ಆಂದೋಲನಗಳನ್ನು ನಡೆಸಿತು. ಈ ಎಲ್ಲಾ ಚಟುವಟಿಕೆಗಳೊಂದಿಗೆ ಎಗ್ಲಾಂಟೈನ್ ಜೆಬ್ ಮಕ್ಕಳಿಗಾಗಿ ಅತ್ಯಂತ ಕಾಳಜಿ ಇರುವ ಹಾಗೂ ಉತ್ಕಟವಾದ ಭಾವನೆಗಳಿರುವ ಅಂತರಾಷ್ಟ್ರೀಯ ಮಟ್ಟದ ವ್ಯಕ್ತಿಯಾಗಿ ಬೆಳೆದರು. ಇದರ ಫಲವಾಗಿ ಮಕ್ಕಳ ಕಲ್ಯಾಣಕ್ಕಾಗಿ ಕೆಲಸ ಮಾಡುವ ಹಲವಾರು ಸಂಸ್ಥೆಗಳ ಒಕ್ಕೂಟವಾಗಿ ೧೯೨೦ರಲ್ಲಿ 'ಸೇವ್ ದ ಚಿಲ್ಡ್ರನ್ ಇಂಟರ್‌ನ್ಯಾಷನಲ್ ಯೂನಿಯನ್' ಅನ್ನು ಸ್ಥಾಪಿಸಲಾಯಿತು. ಇದರ ಮೂಲಕ ಹಲವಾರು ಮಕ್ಕಳ ಕಲ್ಯಾಣ ಸಂಸ್ಥೆಗಳು ಸಹಕಾರದಿಂದ ಕೆಲಸ ಮಾಡುವುದು ಮತ್ತು ಸಂಗ್ರಹಿಸಿದ ನಿಧಿಯನ್ನು ಸಮರ್ಪಕವಾಗಿ ವಿತರಿಸುವುದು ಅಲ್ಲದೆ, ಮಕ್ಕಳ ಕಲ್ಯಾಣ ಮತ್ತು ಅಭಿವೃದ್ಧಿ ಕುರಿತಂತೆ ಸಂಶೋಧನೆಗಳನ್ನೂ ನಡೆಸುವ ಉದ್ದೇಶವನ್ನು ಹೊಂದಿತ್ತು. ಇದರ ಗುರಿ ಜಗತ್ತಿನ ಯಾವುದೇ ಭಾಗದಲ್ಲೂ ಯಾವುದೆ ರೀತಿಯ ದೇಶ, ಭಾಷೆ, ಬಣ್ಣ, ಜನಾಂಗ, ರಾಜಕೀಯ ನಿಲುವು ಇನ್ಯಾವುದೇ ರೀತಿಯ ತಾರತಮ್ಯಗಳನ್ನು ತೋರದೆ ತೊಂದರೆಗೀಡಾದ ಮಕ್ಕಳಿಗೆ ನೆರವು ನೀಡುವುದಾಗಿತ್ತು.

೯೨೩ರ ಹೊತ್ತಿಗೆ ಎಗ್ಲಾಂಟೈನ್‌ಗೆ ಸ್ಪಷ್ಟವಾದ ದೃಷ್ಟಿಕೋನ ಬಂದಿತು – ಮಕ್ಕಳ ಹಕ್ಕುಗಳು. ಆಗಲೇ ಆಕೆ ಜಿನೀವಾದಲ್ಲಿ ನಡೆಯುತ್ತಿದ್ದ ಅಂತಾರಾಷ್ಟ್ರೀಯ ಸಂಘಟನೆಯ ಸಭೆಗೆ ಹೊರಟರು. ಆಗಲೇ ಆಕೆ ಜಿನೀವಾದಲ್ಲಿ ನಡೆಯುತ್ತಿದ್ದ ಅಂತಾರಾಷ್ಟ್ರೀಯ ಸಂಘಟನೆಯ ಸಭೆಗೆ ಹೊರಟರು. ಆಕೆಯ ಮನಸ್ಸಿನಲ್ಲಿ ಒಂದು ಪ್ರಬಲವಾದ ವಿಚಾರವಿತ್ತು – ಮಕ್ಕಳಿಗಾಗಿ ಒಂದು ಸನ್ನದನ್ನು ನಿರ್ಮಿಸುವುದು. ಜೆಬ್‌ಳ ಒತ್ತಾಯದಿಂದಾಗಿ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ಮಕ್ಕಳ ಸ್ಥಿತಿಗತಿಗಳನ್ನು ಆಕೆ ವಿಶ್ಲೇಷಿಸಿದ ರೀತಿಯಿಂದಾಗಿ ಆಗಿನ ರಾಷ್ಟ್ರಗಳ ಒಕ್ಕೂಟದ ನಾಯರಗಳೊಂದಿಗೆ ಆಯಿತು.

- ಯಾವುದೇ ದೇಶ, ಜಾತಿ, ವರ್ಣದ ಬೇಧವಿಲ್ಲದೆ ಮಕ್ಕಳಿಗೆ ರಕ್ಷಣೆ ನೀಡಬೇಕು.
- ಮಕ್ಕಳನ್ನು ಕುಟುಂಬದ ಆಸ್ತಿಯೆಂದು ಪರಿಗಣಿಸಿ ಕಾಳಜಿ ವಹಿಸಬೇಕು.
- ಮಗುವು ದೈಹಿಕವಾಗಿ, ಮಾನಸಿಕವಾಗಿ, ಸ್ವಾಭಾವಿಕ ಬೆಳವಣಿಗೆ ಹೊಂದಲು ಅವಕಾಶ ನೀಡಬೇಕು.
- ಹಸಿದ ಮಕ್ಕಳಿಗೆ ಆಹಾರ, ಅನಾರೋಗ್ಯದಿಂದ ಬಳಲುವ ಮಕ್ಕಳಿಗೆ ಚಿಕಿತ್ಸೆ, ಮಾನಸಿಕವಾಗಿ ಅಥವಾ ದೈಹಿಕವಾಗಿ ಊನಗೊಂಡ ಮಕ್ಕಳಿಗೂ ಶಿಕ್ಷಣ, ಅನಾಥ ಮಕ್ಕಳಿಗೆ ವಸತಿ ಕಲ್ಪಿಸಬೇಕು.
- ಪ್ರಕೃತಿ ವಿಕೋಪದ ಪರಿಸ್ಥಿತಿಯಲ್ಲಿ ಪರಿಹಾರ ನೀಡುವಾಗ ಮಕ್ಕಳಿಗೆ ಮೊದಲ ಆದ್ಯತೆ ನೀಡಬೇಕು.
- ಮಕ್ಕಳನ್ನು ಯಾವುದೇ ರೀತಿಯ ಶೋಷಣೆಗೆ ಒಳಗಾಗದಂತೆ ರಕ್ಷಿಸಬೇಕು.
- ಮಕ್ಕಳು ಸಮುದಾಯ ಸೇವೆಯಲ್ಲಿ ತೊಡಗಿಸಿಕೊಳ್ಳುವಂತೆ ಅವರ ಪ್ರತಿಭೆಗಳನ್ನು ಬೆಳೆಸಬೇಕು.

೫೦ನೇ ವರ್ಷಕ್ಕೆ ಕಾಲಿಡುವ ಹೊತ್ತಿಗೆ ಜೆಬ್‌ಳ ಆರೋಗ್ಯ ಹದಗೆಡತೊಡಗಿತು. ಗಾಯ್ಟರ್ ತೊಂದರೆಯಿಂದಾಗಿ ಮೂರು ಬಾರಿ ಶಸ್ತ್ರ ಚಿಕಿತ್ಸೆಗೆ ಒಳಗಾಗಿದ್ದ ಎಗ್ಲಾಂಟೈನ್ ಜೆಬ್ ೧೯೨೮ರ ಡಿಸೆಂಬರ್ ೧೭ರಂದು ಜಿನೀವಾದಲ್ಲಿ ತನ್ನ ೫೨ನೇ ವರ್ಷದಲ್ಲಿ ನಿಧನ ಹೊಂದಿದರು.

ಆ ದಿನಗಳ ಎಷ್ಟೋ ಜನರ ಕಲ್ಪನೆಗೆ ಬಾರದ ವಿಚಾರವಾದ 'ಜಗತ್ತಿನ ಎಲ್ಲ ಮಕ್ಕಳಿಗೆ ಅವರ ಹಕ್ಕುಗಳು ದೊರಕಲೇಬೇಕು' ಎನ್ನುವ ದೃಷ್ಟಿಕೋನವನ್ನು ಎಗ್ಲಾಂಟೈನ್ ಜೆಬ್ ಪ್ರತಿಪಾದಿಸಿದಳು. ಈಗ ಜೆಬ್ ಹೇಳಿದ ಮಾತುಗಳು ಎಷ್ಟು ಪ್ರಮುಖ ಎಂದು ಚಿಂತಿಸುವ ಹಾಗೂ ಅವುಗಳನ್ನು ಜಾರಿ ಮಾಡುವ ಸಮಯ ನಮ್ಮೆದುರು ಇದೆ.

**ಮಕ್ಕಳ ಹಕ್ಕುಗಳ ಜಾರಿಗಾಗಿ ಗ್ರಾಮ ಪಂಚಾಯಿತಿಗಳಿಂದ ಮಕ್ಕಳ ಹಕ್ಕುಗಳ ವಿಶೇಷ ಗ್ರಾಮಸಭೆ:**

ಭಾರತ ಗ್ರಾಮಗಳ ದೇಶ. ಭಾರತದ ಬಹುಪಾಲು ಜನರಿರುವುದು ಗ್ರಾಮಗಳಲ್ಲಿ. ಭಾರತದ ಒಟ್ಟು ಜನಸಂಖ್ಯೆಯಲ್ಲಿ ೪೩% ಮಕ್ಕಳು (೨೦೦೧ ರ ಜನಗಣತಿ). ಈ ಮಕ್ಕಳ ಬದುಕು, ರಕ್ಷಣೆ, ವಿಕಾಸ ಮತ್ತು ಭಾಗವಹಿಸುವಿಕೆಗಾಗಿ ಇರುವ ಎಲ್ಲಾ ಸೇವಾ ಸೌಲಭ್ಯಗಳು ಹಳ್ಳಿಗಳಲ್ಲಿ ಜಾರಿಯಲ್ಲಿದೆ. ಹೀಗೆ ಮಕ್ಕಳಿಗಾಗಿ

ಡೆದಿರುವ ಆರೋಗ್ಯ, ಶಿಕ್ಷಣ, ಮನೋರಂಜನೆ, ರಕ್ಷಣೆಯ ಯೋಜಿತ ಕಾರ್ಯಕ್ರಮಗಳು ಮಕ್ಕಳ ಸಂವಿಧಾನ ದ್ಧ ಹಕ್ಕುಗಳು. ಮಕ್ಕಳ ಈ ಹಕ್ಕುಗಳನ್ನು ಜಾರಿ ಮಾಡುವುದು, ಮಕ್ಕಳಿಗಾಗಿ ತಮ್ಮ ಬದ್ಧತೆಯನ್ನು ೋರುವುದು ಸ್ಥಳೀಯ ಸರ್ಕಾರಗಳಾದ ಗ್ರಾಮ ಪಂಚಾಯಿತಿಗಳ ಕರ್ತವ್ಯ. ಇದಕ್ಕಾಗಿ ಮಕ್ಕಳ ಹಕ್ಕುಗಳ ವಿಶೇಷ ್ರಮ ಸಭೆ.

ಮಕ್ಕಳ ಹಕ್ಕುಗಳ ಜಾರಿಗಾಗಿ ಗ್ರಾಮ ಪಂಚಾಯಿತಿಗಳು ಮಕ್ಕಳ ಹಕ್ಕುಗಳ ವಿಶೇಷ ಗ್ರಾಮಸಭೆಗಳನ್ನು ್ರತಿ ವರ್ಷ ನವೆಂಬರ್ ತಿಂಗಳಿನಲ್ಲಿ ನಡೆಸಬೇಕೆಂದು ಕರ್ನಾಟಕ ಸರಕಾರವು ಸುತ್ತೋಲೆ ಹೊರಡಿಸಿದೆ. ಗ್ರಾಮ ಂಚಾಯ್ತಿಗಳು ಮಕ್ಕಳ ಪರಿಸ್ಥಿತಿಯ ಬಗ್ಗೆ ಕಾಳಜಿಯಿಂದ ಮಕ್ಕಳ ವಿವಿಧ ವಿಚಾರಗಳನ್ನು ಅಭಿವೃದ್ಧಿ ೂಚಕಗಳಾಗಿ ಇಟ್ಟಕೊಂಡು ಚಿಕ್ಕ ಚಿಕ್ಕ ಜನಸಮುದಾಯಗಳ ವಾರ್ಡ ಮಟ್ಟದಲ್ಲಿ ಮಕ್ಕಳಿಗೆ ಸಂಬಂಧಿಸಿದಂತೆ ಮಸ್ಯೆಗಳನ್ನು ಕಂಡುಕೊಂಡು, ಅವುಗಳ ಪರಿಹಾರಕ್ಕೆ ಕ್ರಮಕೈಗೊಂಡು, ಮುಂದೆ ಅದರಲ್ಲಿ ಆಗಿರುವ ್ರಗತಿಗಳನ್ನು ಕಂಡುಕೊಂಡು ವಿಶ್ಲೇಷಣೆ ಮಾಡಿ ಸ್ಥಳೀಯವಾಗಿಯೇ ದುರಸ್ಥಿ ಕಾರ್ಯಗಳನ್ನು ಕೈಗೊಂಡಲ್ಲಿ ಂಥಹ ಗ್ರಾಮ ಪಂಚಾಯ್ತಿಗಳು "ಮಕ್ಕಳ ಸ್ನೇಹಿ" ಆಗಬಹುದು.

ಮಕ್ಕಳ ಸ್ನೇಹಿ ಗ್ರಾಮ ಪಂಚಾಯಿತಿ:

ಭಾರತದ ಭವಿಷ್ಯ ನಮ್ಮ ಮಕ್ಕಳ ಕೈಯಲ್ಲಿದೆ. ಮಕ್ಕಳೆಲ್ಲರೂ ಅರ್ಥಪೂರ್ಣ ಬದುಕು ಪಡೆದರೆ ಮಾತ್ರ ಭಾರತದ ಭವಿಷ್ಯ ಉಜ್ವಲವಾಗುತ್ತದೆ. ಮಕ್ಕಳ ಬದುಕು ನೆಮ್ಮದಿಯಿಂದ ರಕ್ಷಿತ ವಾತಾವರಣದಲ್ಲಿ ಒತ್ತಡವಿಲ್ಲದೆ ಸಾಗಿದರೆ ಮಾತ್ರ ಭವ್ಯ ಭಾರತದ ಕನಸು ನನಸಾಗುತ್ತದೆ.

ಇಂತಹ ಕನಸು ಸಾಕಾರವಾಗಿಸುವ ಜವಬ್ದಾರಿ ನಮ್ಮದು. ಸ್ಥಳೀಯ ಸರ್ಕಾರವಾದ ಗ್ರಾಮ ಪಂಚಾಯಿತಿಗಳದ್ದು.

ಮಕ್ಕಳನ್ನು ಜೋಪಾನ ಮಾಡುವ, ಶಿಕ್ಷಣ ಒದಗಿಸುವ ಮತ್ತು ಆರೋಗ್ಯ ಕಾಪಾಡುವ ಜವಾಬ್ದಾರಿ ಹೇಗೆ ಗ್ರಾಮ ಪಂಚಾಯಿತಿಗಳ ಹೆಗಲೇರಿತು ಎಂದು ನೀವು ಪ್ರಶ್ನಿಸಬಹುದು. ಇದೆಲ್ಲಾ ಗ್ರಾಮ ಪಂಚಾಯಿಗಳ ರಚನೆಯ ಕಾಲಕ್ಕೆ ಸಿದ್ಧವಾದ ಕಾನೂನು, ನಿಯಮಗಳಲ್ಲೇ ಇದೆ. ಗ್ರಾಮ ಪಂಚಾಯಿತಿಗಳ ಸ್ಥಾಯೀ ಸಮಿತಿಗಳಿಗೆ ಮಕ್ಕಳ ವಿಚಾರಗಳನ್ನು ಗಮನಿಸುವ ಜವಾಬ್ದಾರಿಯಿದೆ.

ಅಂದರೆ, ಈ ಬಗ್ಗೆ ಅಂಗನವಾಡಿ, ಆರೋಗ್ಯ, ಶಿಕ್ಷಣ ಸೇವೆ ನೀಡುವವರು, ಮಕ್ಕಳ ರಕ್ಷಣೆ ಮಾಡುವವರು, ಮಕ್ಕಳ ಸರ್ವತೋಮುಖ ಅಭಿವೃದ್ಧಿಗೆ ನೆರವಾಗುವವರೆಲ್ಲರೂ ನಿರ್ದಿಷ್ಟವಾದ ಅಂಕಿ ಅಂಶಗಳನ್ನು ಇಟ್ಟಕೊಂಡು ಮಕ್ಕಳ ಸ್ಥಿತಿಗತಿಗಳನ್ನು ಅವಲೋಕಿಸಿ ಮಕ್ಕಳೂ ಭಾಗವಹಿಸುವ ಸಮುದಾಯದ ಸಭೆಯಲ್ಲಿ ಸೂಕ್ತ ನಿರ್ಧಾರಗಳನ್ನು ತೆಗೆದುಕೊಳ್ಳಬೇಕು. ಗ್ರಾಮದ ಮಕ್ಕಳ ವಿವಿಧ ಪರಿಸ್ಥಿತಿಗಳನ್ನು ಸಮುದಾಯದೊಡನೆ ಗ್ರಾಮ ಪಂಚಾಯ್ತಿಗಳೇ ಏರ್ಪಾಟು ಮಾಡುವ ವಿಶೇಷ ಗ್ರಾಮ ಸಭೆಯಲ್ಲಿ ಮಂಡಿಸಿ ಬಹಿರಂಗ ಚರ್ಚೆ ಹಾಗೂ ನಿರ್ಧಾರಗಳನ್ನು ಕೈಗೊಳ್ಳುವ ಅವಕಾಶವೇ ಮಕ್ಕಳ ಹಕ್ಕುಗಳ ವಿಶೇಷ ಗ್ರಾಮ ಸಭೆ.

ಮಕ್ಕಳ ಹಕ್ಕುಗಳ ವಿಶೇಷ ಗ್ರಾಮಸಭೆ ಮಕ್ಕಳ ಇಂದಿನ ಸ್ಥಿತಿಗತಿಗಳನ್ನು ವಿಶ್ಲೇಷಿಸಿ, ಮಕ್ಕಳಿಗಾಗಿ ಇರುವ ೋಜನೆಗಳ ಗುಣಾತ್ಮಕ ಹಾಗೂ ಪ್ರಮಾಣಾತ್ಮಕ ಸೇವಾ ಮೌಲ್ಯಗಳನ್ನು ಹಕ್ಕುಗಳ ಹಿನ್ನೆಲೆಯಲ್ಲಿ ಗುರುತಿಸಿ, ೇವಾ ಸೌಲಭ್ಯಗಳ ಗುಣಮಟ್ಟವನ್ನು ಹೆಚ್ಚಿಸುವುದಾಗಿದೆ. ಮಕ್ಕಳ ಹಕ್ಕುಗಳ ವಿಶೇಷ ಗ್ರಾಮ ಸಭೆಗಳನ್ನು ಗ್ರಾಮ ಂಚಾಯಿತಿಗಳು ನಡೆಸಬೇಕೆಂದು ನಿರ್ದೇಶಿಸಿ ಕರ್ನಾಟಕ ಸರ್ಕಾರದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ಾಜ್ ಇಲಾಖೆ ಸಚಿವಾಲಯವು ಸುತ್ತೋಲೆಗಳನ್ನು ಹೊರಡಿಸಿದೆ.

ಇವುಗಳಂತೆ ರಾಜ್ಯದ ಎಲ್ಲಾ ಜಿಲ್ಲೆಗಳ ಎಲ್ಲಾ ಗ್ರಾಮ ಪಂಚಾಯಿತಿಗಳು ನವೆಂಬರ್ ತಿಂಗಳಿನಲ್ಲಿ ಮಕ್ಕಳ ಕ್ಕುಗಳ ಮಾಸಾಚರಣೆ ಹಮ್ಮಿಕೊಳ್ಳ ಬೇಕು ಹಾಗೂ ಈ ತಿಂಗಳಲ್ಲಿ ಒಂದು ದಿನವನ್ನು ಮಕ್ಕಳ ಹಕ್ಕುಗಳ ಶೇಷ ಗ್ರಾಮ ಸಭೆ ನಡೆಸಲು ಮೀಸಲಿಡುವುದು ಗ್ರಾಮ ಪಂಚಾಯಿತಿಗಳಿಗೆ ಕಡ್ಡಾಯ. ಮಕ್ಕಳ ಭಿಪ್ರಾಯಗಳಿಗೆ ಅವಕಾಶ ನೀಡಲು ಗ್ರಾಮಸಭೆಗಳಲ್ಲಿ ಮಕ್ಕಳ ಭಾಗವಹಿಸುವಿಕೆಯನ್ನು ಖಾತರಿ ಡಿಸಬೇಕಾಗಿದೆ.

**ಉದ್ದೇಶಗಳು:**

- ✓ ಗ್ರಾಮ ಪಂಚಾಯ್ತಿ ಮಿತಿಯಲ್ಲಿ ಬರುವ ಎಲ್ಲಾ ಸೇವಾ ನಿರ್ವಾಹಕರು ಒಗ್ಗೂಡಿ ತಮ್ಮ ಇಲಾಖೆಗೆ ಸಂಬಂಧಿಸಿದಂತೆ ಮಕ್ಕಳ ಮಾಹಿತಿಯನ್ನು ಸಂಗ್ರಹಿಸುವುದು ಮತ್ತು ಹಂಚಿಗೊಳ್ಳುವುದು.
- ✓ ಈ ಮಾಹಿತಿ ಮತ್ತು ಮಕ್ಕಳ ಹಕ್ಕುಗಳ ವಿಶೇಷ ಗ್ರಾಮ ಸಭೆಯಲ್ಲಿ ಕಂಡು ಬಂದ ವಿಷಯಗಳ ಆಧಾರದ ಮೇಲೆ ಗ್ರಾಮ ಪಂಚಾಯ್ತಿಯ ಎಲ್ಲ ಹಳ್ಳಿಗಳು/ವಾರ್ಡ್‌ಗಳಿಗೆ ನಿರ್ಧಿಷ್ಟ ಮಕ್ಕಳ ಅಭಿವೃದ್ಧಿ ಯೋಜನೆಯ ನಿರ್ಮಾಣ.
- ✓ ಆಯಾ ಚುನಾಯಿತ ಗ್ರಾಮ ಪಂಚಾಯ್ತಿ ಸದಸ್ಯರು ತಮ್ಮ ವಾರ್ಡ್ ಸಭೆಯಲ್ಲಿ ಮಕ್ಕಳ ಮಾಹಿತಿ ಆಧರಿಸಿ ಚರ್ಚೆ ನಡೆಸುವುದು ಹಾಗೂ ಕ್ರಮಗಳನ್ನುಗ ಕೈಗೊಳ್ಳುವುದು.

ಗ್ರಾಮ ಪಂಚಾಯ್ತಿ ಅಭಿವೃದ್ಧಿ ಯೋಜನೆಯಲ್ಲಿ ಭೌತಿಕ ಅಭಿವೃದ್ಧಿ ಮತ್ತು ಆರ್ಥಿಕ ಅಭಿವೃದ್ಧಿಗೆ ಗಮನ ನೀಡುವುದರ ಜೊತೆಗೆ, ಮಕ್ಕಳ ಆರೋಗ್ಯ, ಶಿಕ್ಷಣ, ರಕ್ಷಣೆ, ಅಭಿವೃದ್ಧಿ ಮತ್ತು ಭಾಗವಿಸುವಿಕೆಗೆ ಆದ್ಯತೆ ನೀಡುವುದು.

ಮಕ್ಕಳ ಹಕ್ಕುಗಳ ವಿಶೇಷ ಗ್ರಾಮ ಸಭೆಯಲ್ಲಿ ಚರ್ಚಿಸಬೇಕಾದ ವಿಚಾರಗಳು ಈ ಕೆಳಗಿನಂತಿವೆ.

- ➢ ಗ್ರಾಮ ಪಂಚಾಯಿತಿಯಲ್ಲಿ ಇರುವ ಮಕ್ಕಳ ವಿವರ ಹಾಗೂ ಸ್ಥಿತಿಗತಿ.
- ➢ ಆಶಾ ಮತ್ತು ಆರೋಗ್ಯ ಕಾರ್ಯಕರ್ತೆ, ಪ್ರಾಥಮಿಕ ಆರೋಗ್ಯ ಕೇಂದ್ರದ ಸೇವಾ ಸೌಲಭ್ಯಗಳ ವಿಶ್ಲೇಷಣೆ.
- ➢ ಅಂಗನವಾಡಿಗಳ ಸೇವಾ ಗುಣಮಟ್ಟಗಳ ವಿಶ್ಲೇಷಣೆ.
- ➢ ಶಾಲಾ ಶಿಕ್ಷಣ ಹಾಗೂ ಶಾಲಾ ವ್ಯವಸ್ಥೆಗಳ ವಿಶ್ಲೇಷಣೆ.

- ಮಕ್ಕಳ ರಕ್ಷಣೆಗೆ ಸಂಬಂಧಪಟ್ಟಂತೆ, ಮಕ್ಕಳ ದುಡಿಮೆ, ಮಕ್ಕಳ ಮೇಲಿನ ದೌರ್ಜನ್ಯ, ಹಿಂಸೆ, ಅನ್ಯಾಯದ ವಿವರ ಪಡೆದು ಅವುಗಳ ತಡೆ ಯತ್ನಗಳು.

ಈ ವಿಶೇಷ ಗ್ರಾಮ ಸಭೆ ನಡೆಸಿ ಮಂಡಿಸಿದ ವಿಚಾರಗಳು ಹಾಗೂ ನಿರ್ಧಾರ, ವರದಿಗಳನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ನೀಡುವುದು ಕಡ್ಡಾಯವಾಗಿದೆ.

**ಮಕ್ಕಳ ಹಕ್ಕುಗಳ ಸಂಘ:**

ಸಮಾನ ಮನಸ್ಕರು ಒಟ್ಟಿಗೆ ಸೇರಿ ನಿರ್ದಿಷ್ಟ ಗುರಿಯತ್ತ ನಡೆಯುವುದೇ ಸಂಘ. ತಮಗೆ ಸಂಬಂಧಿತ ವಿಚಾರ, ವಿಷಯಗಳ ಬಗೆಗೆ ಸಂಘದಲ್ಲಿ ಚರ್ಚೆ, ಸಮಾಲೋಚನೆ, ಕೊಡುಕೊಳ್ಳುವಿಕೆ ಮಾಡಿಕೊಳ್ಳಬಹುದು. ಸಂಘದಲ್ಲಿ ಒಗ್ಗಟ್ಟಿನ ಶಕ್ತಿಯಿದೆ. ತಮ್ಮ ನ್ಯಾಯೋಚಿತವಾದ ಹಿತಕ್ಕೆ ಎಲ್ಲಿಂದಾದರೂ ತೊಂದರೆ ಉಂಟಾದಲ್ಲಿ ಸಂಘದ ಸದಸ್ಯರು ಚರ್ಚಿಸಿ, ಸಮಾಲೋಚಿಸಿ, ಪ್ರತಿಕ್ರಿಯಿಸಿಬಹುದು/ಪ್ರತಿಭಟಿಸಬಹುದು. ತಮಗೆ ನ್ಯಾಯ ಒದಗಿಸುವಂತೆ ಒತ್ತಾಯಿಸಬಹುದು. ಶಾಲಾ ಮಕ್ಕಳ ಹಕ್ಕುಗಳಿಂದಲೂ ಇಂತಹ ಕ್ರಮ ಕೈಗೊಳ್ಳಲು ಸಾಧ್ಯವಿದೆ. ಹೀಗೆಂದು ಎಲ್ಲಾ ಶಾಲೆಗಳಲ್ಲೂ ಮಕ್ಕಳ ಮೇಲೆ ಅಕ್ರಮ, ಅನಾಚಾರ, ದೌರ್ಜನ್ಯ, ಹಿಂಸೆ, ಮೋಸ, ಒತ್ತಡ, ಹಲ್ಲೆ ನಡೆದಿದೆ ಎಂದೇನೂ ಅಲ್ಲ. ಅದೇ ರೀತಿ ಎಲ್ಲ ಶಾಲೆಗಳೂ ಮಕ್ಕಳಿಗೆ ಸೂಕ್ತವಾದ ವಾತಾವರಣ ಹೊಂದಿವೆ ಎಂದೂ ಹೇಳುವಂತಿಲ್ಲ. ಎಲ್ಲೆಲ್ಲಿ ಮಕ್ಕಳ ಪರವಾದ ವ್ಯವಸ್ಥೆಗಳಿವೆಯೋ ಅವನ್ನು ಉಳಿಸಿ ಬೆಳೆಸಲು ಯತ್ನಿಸುವುದು ಶಾಲಾ ಮಕ್ಕಳ ಹಕ್ಕುಗಳ ಸಂಘದ ದೃಷ್ಟಿ.

**ಉದ್ದೇಶ:**

೧) ವಿದ್ಯಾರ್ಥಿಗಳಲ್ಲಿ ಮಕ್ಕಳ ಹಕ್ಕು, ಉದ್ದೇಶ ಮತ್ತು ಕರ್ತವ್ಯಗಳ ಬಗ್ಗೆ ಅರಿವು ಮೂಡಿಸುವುದು.

೨) ಶಿಕ್ಷಕ ಮತ್ತು ಶಿಕ್ಷಕೇತರ ವರ್ಗದಲ್ಲಿ ಮಕ್ಕಳ ಹಕ್ಕುಗಳ ಬಗ್ಗೆ ಜಾಗ್ರತೆ ಮತ್ತು ಮಕ್ಕಳ ಹಕ್ಕುಗಳಿಗೆ ಬದ್ಧರಾಗಲು ಕ್ರಮಕೈಗೊಳ್ಳುವುದು.

೩) ಎಲ್ಲಾ ಮಕ್ಕಳಿಗೂ ಅವರ ಹಕ್ಕುಗಳು ಸಂಪೂರ್ಣ ರೂಪದಲ್ಲಿ ದೊರಕುವಂತಹ ವಾತಾವರಣ ಸೃಷ್ಟಿ.

೪) ನಾಯಕತ್ವ ಬೆಳವಣಿಗೆ.

೫) ಚರ್ಚೆ ನಡೆಸಿ ನಿರ್ಧಾರ ಕೈಗೊಳ್ಳುವ ಸಾಮರ್ಥ್ಯವೃದ್ಧಿ.

೬) ಶಾಲಾಭಿವೃದ್ಧಿ ಮತ್ತು ಉಸ್ತುವಾರಿ ಸಮಿತಿ ಹಾಗೂ ಪಂಚಾಯ್ತಿಗೆ, ಶಾಲೆ ಮತ್ತು ವಿದ್ಯಾರ್ಥಿಗಳ ಪರಿಸ್ಥಿತಿ ಬಗ್ಗೆ ಮಾಹಿತಿ ನೀಡುವುದು ಹಾಗೂ ಸೂಕ್ತ ಕ್ರಮಗಳಿಗೆ ಒತ್ತಾಯಿಸುವ ಕೊಂಡಿಯಾಗುವುದು.

**ಮಕ್ಕಳ ಹಕ್ಕುಗಳ ಸಂಘದ ರಚನೆ:**

ಪ್ರತಿ ತರಗತಿಯಿಂದ ಇಬ್ಬರು ಪ್ರತಿನಿಧಿಗಳು ಇರುತ್ತಾರೆ.(ಗಂಡು ಮತ್ತು ಹೆಣ್ಣು ವಿದ್ಯಾರ್ಥಿಗಳಿಬ್ಬರೂ ಇದ್ದಲ್ಲಿ ಒಂದು ಹುಡುಗ ಮತ್ತು ಒಂದು ಹುಡುಗಿ ಆಯ್ಕೆ ಕಡ್ಡಾಯ). ಪ್ರತಿನಿಧಿಗಳಿಗೆ ಎರಡು ವರ್ಷಗಳ ಕಾಲಾವಧಿ(ಅಂದರೆ ಪ್ರತಿ ವರ್ಷ, ಪ್ರತಿ ತರಗತಿ ಒಂದು ಪ್ರತಿನಿಧಿಯನ್ನು ಮಾತ್ರ ಹೊಸದಾಗಿ ಆಯ್ಕೆ ಮಾಡಲಾಗುತ್ತದೆ. ಇನ್ನೊಬ್ಬರು ಪ್ರತಿನಿಧಿ ಹಿಂದಿನ ವರ್ಷದ ತರಗತಿಯಿಂದ ಮುಂದುವರೆಯುತ್ತಾರೆ. ಹೊಸದಾಗಿ

ಆಯ್ಕೆಯಾದವರು ಆ ಮುಂದಿನ ವರ್ಷದಲ್ಲೂ ಮುಂದುವರೆಯುತ್ತಾರೆ.) ಇದರೆ ಉದ್ಧೇಶ ಸಂಘದ ಸದಸ್ಯರಲ್ಲಿ ಯೋಜನೆ, ಯೋಚನೆ, ಮನಸ್ಥಿತಿಗಳು ಮುಂದುವರೆಯಲು ಅವಕಾಶ ಸಿಗುವಂತೆ ಮಾಡುವುದು.

ಎಲ್ಲಾ ತರಗತಿಗಳ ವಿದ್ಯಾರ್ಥಿ ಪ್ರತಿನಿಧಿಗಳ ಸಭೆ, ಶಾಲಾ ವಿದ್ಯಾರ್ಥಿಗಳಲ್ಲಿ ಇಬ್ಬರು ಮುಖ್ಯ ಪ್ರತಿನಿಧಿಗಳನ್ನು ಆರಿಸುತ್ತದೆ. (ಮೇಲೆ ಹೇಳಿರುವ ನಿಯಮದಂತೆ ಪ್ರತಿ ವರ್ಷ ಇಬ್ಬರು ಹೊಸ ಪ್ರತಿನಿಧಿಯ ಆಯ್ಕೆ). ಪ್ರತಿನಿಧಿಗಳು ಪ್ರತಿ ಹದಿನೈದು ದಿನಕ್ಕೊಮ್ಮೆ ಸಭೆ ಸೇರಬೇಕು. ಪ್ರತಿ ಮೂರು ತಿಂಗಳಿಗೊಮ್ಮೆ ಎಲ್ಲಾ ವಿದ್ಯಾರ್ಥಿಗಳ ಸಾಮಾನ್ಯ ಸಭೆ ನಡೆಸಬೇಕು.

## ವಿಧಾನ ಸೌಧದಲ್ಲಿ ಮಕ್ಕಳಿದ್ದಾರೆಯೇ?

ಮಕ್ಕಳ ವಿಚಾರಗಳು, ಸಮಸ್ಯೆಗಳು, ಚಿಂತನೆಗಳು ಮತ್ತು ಸಂಬಂಧಿತ ಇತರ ವಿಚಾರಗಳನ್ನು ಕುರಿತು ಸದನದ ಅಧವೇಶನಗಳಲ್ಲಿ ಪ್ರಶ್ನೆಗಳನ್ನು ಕೇಳುವ ಮತ್ತು ಸಂವಾದ, ಚರ್ಚೆಗಳು ಹೆಚ್ಚಿನ ಮಟ್ಟದಲ್ಲಿಯಾಗುತ್ತಿಲ್ಲ ಎನ್ನುವುದು ಮಕ್ಕಳ ಹಕ್ಕುಗಳ ರಕ್ಷಣೆ ಹಾಗೂ ಜಾರಿಗಾಗಿ ಕೆಲಸ ಮಾಡುತ್ತಿರುವ ಆಂದೋಲನಗಳು ಹಲವು ವರ್ಷಗಳಿಂದ ಚರ್ಚಿಸುತ್ತಿರುವ ವಿಷಯ. ಚುನಾಯಿತ ಪ್ರತಿನಿಧಿಗಳು ಮಕ್ಕಳು ಮತ್ತು ಮಕ್ಕಳಿಗೆ ಸಂಬಂಧಿಸಿ ವಿಷಯಗಳ ಬಗ್ಗೆ ಸದನ ಸಭೆಗಳಲ್ಲಿ ಮಾತನಾಡುತ್ತಾರೆಯೇ? ಯಾವ ವಿಷಯಗಳ ಬಗ್ಗೆ, ಯಾವ ಮಕ್ಕಳ ಬಗ್ಗೆ, ಎಷ್ಟಯ ಹೊತ್ತು ಚರ್ಚೆ ನಡೆಯುತ್ತದೆ? ಮಕ್ಕಳಿಗೆ ಸಂಬರ್ಂಧಿಸಿದ ವಿಷಯಗಳನ್ನು ಸದನದಲ್ಲಿ ಎತ್ತುವ ಶಾಸಕರು ಯಾರು? ಈ ರೀತಿ ಸದನಗಳಲ್ಲಿ ಎತ್ತಿದ ಪ್ರಶ್ನೆಗಳು ಮಕ್ಕಳ ಬದುಕಿನ ಮೇಲೆ ಪರಿಣಾಮ ಬೀರಿವೆಯೇ? ಈ ರೀತಿಯ ಪ್ರಶ್ನೆಗಳು ಮಕ್ಕಳ ಹಕ್ಕುಗಳ ರಕ್ಷಣೆಯ ಕ್ಷೇತ್ರದಲ್ಲಿ ತೊಡಗಿಸಿಕೊಂಡ ಬಹುತೇಕ ಜನರನ್ನು ಬಹುದಿದಂದಲೂ ಕಾಡುತ್ತಿವೆ.

ಇದನ್ನು ಗಂಭೀರವಾಗಿ ತೆಗೆದುಕೊಂಡಿರುವ ಚೈಲ್ಡ್ ರೈಟ್ ಟ್ರಸ್ಟ್, ಯೂನಿಸೆಫ್ನ ಸಹಾಯದೊಂದಿಗೆ ವಿಧಾನ ಸಭೆ ಮತ್ತು ವಿಧಾನ ಪರಿಷತ್‌ನಲ್ಲಿ ಮಕ್ಕಳ ವಿಚಾರಗಳನ್ನು ಕೇಂದ್ರೀಕರಿಸಿಕೊಂಡ ಪ್ರಶ್ನೆಗಳ ಸಂಗ್ರಹಣೆ ಹಾಗೂ ವಿಶ್ಲೇಷಣೆ ಮಾಡುವ ಯೋಜನೆಯನ್ನು ೨೦೦೫ ರಿಂದ ನಡೆಸುತ್ತಿದೆ. ಈಗ ಇದನ್ನು ಕೆ.ಸಿ.ಆರ್.ಓ. ಮುಂದುವರೆಸಿದೆ.

ಪ್ರಶ್ನೆ ಮತ್ತು ಉತ್ತರ ವಿಶ್ಲೇಷಣೆ:

೧) ವಿಧಾನ ಸಭೆಯ ಕಲಾಪಗಳಲ್ಲಿ ಮಕ್ಕಳ ವಿಚಾರಗಳನ್ನು ಕೇಂದ್ರೀಕರಿಸಿ ಎಷ್ಟು ಪ್ರಶ್ನೆಗಳು ಕೇಳಲ್ಪಟ್ಟವು? ಈ ಪ್ರಶ್ನೆಗಳು ಯಾವ ಸ್ವರೂಪದ್ದಾಗಿವೆ ಮತ್ತು ಯಾವ ಅವಧಯಲ್ಲಿ ಯಾರು ಮಕ್ಕಳನ್ನು ಕೇಂದ್ರೀಕರಿಸಿದ ಪ್ರಶ್ನೆಗಳನ್ನು ಕೇಳುತ್ತಿದ್ದಾರೆ ಎಂದು ತಿಳಿದುಕೊಳ್ಳುವುದು.

೨) ಈ ರೀತಿ ಕೇಳಿ ಬಂದ ಪ್ರಶ್ನೆಗಳು ಎಷ್ಟರ ಮಟ್ಟಿಗೆ ಮಕ್ಕಳ ಹಕ್ಕುಗಳ ದೃಷ್ಟಿಕೋನವನ್ನು ಹೊಂದಿವೆ ಎಂದು ಪರೀಕ್ಷಿಸುವುದು.

೩) ಉಭಯ ಸದನಗಳ ಪ್ರಶ್ನೋತ್ತರ ಅಧಿವೇಶನಗಳನ್ನು ಮಕ್ಕಳ ಹಕ್ಕುಗಳ ದೃಷ್ಟಿಕೋನದಲ್ಲಿ ಒರೆ ಹಚ್ಚಿ, ಮಕ್ಕಳ ಹಕ್ಕುಗಳ ಜಾರಿಗಾಗಿ ದನಿಯೆತ್ತಲು ಒಂದು ಪ್ರಭಾವಿ ಗುಂಪನ್ನು ಎರಡೂ ಸದನಗಳಲ್ಲಿ

ಅಭಿವೃದ್ಧಿಪಡಿಸಿ ಆ ಮೂಲಕ ವಿಧಾನ ಮಂಡಲದ ಉಭಯ ಸದನಗಳ ಕಲಾಪಗಳಲ್ಲಿ ಮಕ್ಕಳಿಗೆ ಸಂಬಂಧಿಸಿದಂತೆ ವಸ್ತುನಿಷ್ಠ ಪ್ರಶ್ನೆಗಳು ನಿರಂತರವಾಗಿ ಮೂಡಿ ಬರುವಂತೆ ನಿಗವಹಿಸುವುದು.

೪) ಮಕ್ಕಳ ಹಕ್ಕುಗಳಿಗೆ ಸಂಬಂಧಿಸಿದಂತೆ ವಿವಿಧ ರಾಜಕೀಯ ಪಕ್ಷಗಳು ನೀಡಿರುವ ಭರವಸೆಗಳನ್ನು ಈಡೇರಿಸಲು ರಾಜಕೀಯ ಪಕ್ಷಗಳ ಮನವೊಲಿಸು ಅಧಿಕೃತ ದಾಖಲೆಯ ಸೃಷ್ಟಿ.

**ಮಕ್ಕಳ ಹಕ್ಕುಗಳಿಗಾಗಿ ಶಾಸಕರ ವೇದಿಕೆ:**

ಕಳೆದ ಐದು ವರ್ಷಗಳಿಂದ ರಾಜ್ಯದ ಶಾಸಕರೊಡನೆ ಚೈಲ್ಡ್ ರೈಟ್ಸ್ ಟ್ರಸ್ಟ್ ೨೦೦೫ ರಿಂದಲೇ ಸಂಪರ್ಕವನ್ನಿಟ್ಟುಕೊಂಡು ಮಕ್ಕಳ ಪರವಾದ ನಿಲುವುಗಳು ಮೂಡುವಂತೆ ಮಾಡುವ ಪ್ರಯತ್ನಗಳನ್ನು ನಡೆಸಿದೆ. ಈ ದಿಸೆಯಲ್ಲಿ ಶಾಸಕರು ತೋರಿರುವ ಆಸಕ್ತಿ ಮತ್ತು ನೀಡಿರುವ ಸಲಹೆಗಳು ಅಮೂಲ್ಯವಾದುದು. ೨೦೦೮ ರಲ್ಲಿ "ಕರ್ನಾಟಕದ ಮಕ್ಕಳ ಸ್ನೇಹಿ ಶಾಸಕ"ರೊಡನೆ ನಡೆದ ಸಭೆಯಲ್ಲಿ ಮಕ್ಕಳ ಹಕ್ಕುಗಳ ಪರವಾದ ಒಂದು ಸಲಹೆ ಹೊರಹೊಮ್ಮಿತ್ತು. ಅದು, "ಕರ್ನಾಟಕದ ಮಕ್ಕಳ ಹಕ್ಕುಗಳಿಗಾಗಿ ಶಾಸಕರ ವೇದಿಕೆ"ಯ ರಚನೆ. ರಾಜ್ಯದ ಮಕ್ಕಳ ಪರವಾಗಿ ನಿರ್ದಿಷ್ಟ ವಿಚಾರಗಳನ್ನು ಕುರಿತು ಚರ್ಚಿಸುವ, ಮಕ್ಕಳಿಗೆ ಸಂಬಂಧಿಸಿದ ವಿವಿಧ ಪರಿಸ್ಥಿತಿಗಳನ್ನು ಅವಲೋಕಿಸಿ, ಪರಿಹಾರೋಪಾಯಗಳನ್ನು ಜಾರಿಗೆ ತರಲು ಸರಕಾರ ಮತ್ತು ಸಮಾಜದ ಗಮನಕ್ಕೆ ತರುವ ಉದ್ದೇಶ ಈ ವೇದಿಕೆಯದ್ದು. ದಿನಾಂಕ ೧೧ ಡಿಸೆಂಬರ್ ೨೦೦೮ ರಲ್ಲಿ ಪ್ರಾರಂಭವಾದ ಕರ್ನಾಟಕದ ಮಕ್ಕಳ ಹಕ್ಕುಗಳಿಗಾಗಿ ಶಾಸಕರ ವೇದಿಕೆಯಲ್ಲಿ ಹಲವಾರು ಶಾಸಕರು ಮಕ್ಕಳ ಪರವಾದ ಕೆಲಸ ಮಾಡುತ್ತಿದ್ದಾರೆ.

**ಸುದ್ದಿಯಲ್ಲಿ ಮಕ್ಕಳು:**

ಸುದ್ದಿಯಲ್ಲಿ ಮಕ್ಕಳು ಚಟುವಟಿಕೆಯ ಮುಖ್ಯ ಉದ್ದೇಶ ಮಕ್ಕಳ ಹಕ್ಕು, ರಕ್ಷಣೆ, ಅಭಿವೃದ್ಧಿ ಕುರಿತಾದ ವಿಷಯಗಳಲ್ಲಿ ಮಾಧ್ಯಮಗಳ(ವಿದ್ಯುನ್ಮಾನ ಮತ್ತು ಮುಖ್ಯವಾಹಿನಿ ಪತ್ರಿಕೆಗಳು) ಪಾತ್ರವನ್ನು ಗಮನಿಸುವುದು ಮತ್ತು ವಿಶ್ಲೇಷಿಸುವುದು. ಹಲವಾರು ಪತ್ರಿಕೆಗಳಲ್ಲಿ ಪ್ರಕಟವಾಗುವ ಮಕ್ಕಳ ಕುರಿತಾದ ವರದಿಗಳು/ಲೇಖನಗಳು/ಸಂದರ್ಶನಗಳು ಇವೆ ಮೊದಲಾದವುಗಳನ್ನು ಮಕ್ಕಳ ಹಕ್ಕುಗಳ ಹಿನ್ನಲೆಯಲ್ಲಿ ವಿಂಗಡಿಸಿ, ಅವುಗಳನ್ನು ಸ್ವಯಂ ಸೇವಾ ಸಂಸ್ಥೆಗಳು, ಶೈಕ್ಷಣಿಕ ಸಂಸ್ಥೆಗಳು, ಶಾಸಕರು ಮತ್ತು ಇನ್ನಿತರ ಆಸಕ್ತ ವ್ಯಕ್ತಿಗಳಿಗೆ "ಸುದ್ದಿಯಲ್ಲಿ ಮಕ್ಕಳು" ಎಂಬ ಶೀರ್ಷಿಕೆಯಡಿಯಲ್ಲಿ ಇ-ಮೇಲ್ ಮುಖಾಂತರ ಕಳುಹಿಸಿಕೊಡಲಾಗುತ್ತಿದೆ. ನಿಗಾ ಕೇಂದ್ರವು ಇಲ್ಲಿಯವರೆಗೆ ಬೆಂಗಳೂರಿನ ಆಯ್ದ ಪತ್ರಿಕೆಗಳಲ್ಲಿ ಮಕ್ಕಳ ಕುರಿತು ಪ್ರಕಟವಾದ ಸುದ್ದಿಗಳ ಸಂಖ್ಯೆಯನ್ನು ಗಮನಿಸುವಲ್ಲಿ ಯಶಸ್ವಿಯಾಗಿದೆ. ಕಳೆದ ೨ ವರ್ಷಗಳಿಂದ ಕರ್ನಾಟಕ ಮಕ್ಕಳ ಹಕ್ಕುಗಳ ನಿಗಾ ಕೇಂದ್ರವು ಸದಸ್ಯ ಸಂಸ್ಥೆಗಳ ಸಹಕಾರದೊಂದಿಗೆ ಮಾಧ್ಯಮ ಪ್ರತಿನಿಧಿಗಳನ್ನು ಮಕ್ಕಳ ಹಕ್ಕುಗಳ ಹಿನ್ನಲೆಯಲ್ಲಿ ಲೇಖನ/ವರದಿಗಳನ್ನು ಬರೆಯುವಂತೆ ಉತ್ತೇಜಿಸಲು ಈಗಾಗಲೇ ಹಲವಾರು ಕಾರ್ಯಾಗಾರಗಳನ್ನು ಆಯೋಜಿಸಿದೆ. ಈ ಪ್ರಯತ್ನಗಳಿಂದಾಗಿ ಮಕ್ಕಳ ಹಕ್ಕುಗಳಿಗಾಗಿ "ಮೀಡೀಯಾ ಗಿಲ್ಡ್" ಆರಂಭವಾಗಿದೆ.

## ಮಕ್ಕಳ ಹಕ್ಕುಗಳ ದೃಷ್ಟಿಕೋನ:

ಹಕ್ಕುಗಳು ಸಹಜ. ಜೊತೆಯಲ್ಲೇ ಹುಟ್ಟಿಬರುತ್ತವೆ. ಸ್ವಾತಂತ್ರ್ಯವನ್ನು 'ಜನ್ಮಸಿದ್ಧ ಹಕ್ಕು' ಎಂದರು ಸ್ವಾತಂತ್ರ್ಯ ವೀರ ಬಾಲಗಂಗಾಧರನಾಥ ತಿಲಕರು. ದೇಶ ಯಾವುದೇ ಇರಲಿ, ಯಾವ ಕಾಲದಲ್ಲಿಯೇ ಆಗಲಿ ಹಕ್ಕುಗಳಿಗೆ ಅರ್ಥ ಬದಲಾಗದು. ಎಲ್ಲರಿಗೂ ಸಾಮಾಜಿಕ, ಆರ್ಥಿಕ, ರಾಜಕೀಯ, ನ್ಯಾಯಿಕ, ನೈತಿಕ ಹಕ್ಕುಗಳು ಸಮಾನ ಎಂಬುದನ್ನು ಬಹಳ ಸಲ ಸಾರಲಾಗಿದೆ. ನಮ್ಮ ಸಾಹಿತ್ಯ, ಚರಿತ್ರೆ, ಪುರಾಣಗಳಾನ್ನು ತಿರುವಿ ಹಾಕುವಾಗ ಹಕ್ಕುಗಳನ್ನು ಕಳೆದುಕೊಂಡವರು ಅಯ್ಯೋ ಎಂದು ಮರುಗುವುದು, ಹಕ್ಕುಗಳ ಅಪಹರಣಕಾರರು ಅಟ್ಟಹಾಸಗೈಯುವುದು, ತಮ್ಮ ಹಕ್ಕುಗಳಾನ್ನೇ ಮಾರಿಕೊಂಡವರು ಹಲುಬುವುದು, ಬೇರೆಯವರ ಮೇಲೆ ಹಕ್ಕಿನಿಂದೆಂಬಂತೆ ಅಧಿಕಾರ ಚಲಾಯಿಸುವುದು ಮೆರೆಯುವುದು ಹೀಗೆಲ್ಲ ಕಂಡುಬರುತ್ತದೆ.

### ಹಕ್ಕು...

ತೀರಾ ಅಗತ್ಯವಾದ, ಬದುಕಲು, ಬೆಳೆಯಲು, ಭಾಗವಹಿಸಲು ಬೇಕಾದ ಮೂಲ ಆವಶ್ಯಕತೆಗಳ ಆಲೋಚನೆ ಮತ್ತು ಅಳವಡಿಕೆ ಹಕ್ಕು ಎಂಬ ಅರ್ಥ ಪಡೆಯುತ್ತದೆ. ಯಾವುದು ಎಲ್ಲರಿಗೂ ನ್ಯಾಯಸಮ್ಮತವೋ, ಸೂಕ್ತವೆಂದು ಕಂಡುಬರುತ್ತದೋ, ಸಮಾಜಕ್ಕೆ ನೈತಿಕವೆಂದು ಪರಿಗಣಿತವಾಗಿದೆಯೋ, ಯಾವುದನ್ನು ಸ್ವಾಭಾವಿಕವಾಗಿ ನಿರಾಕರಿಸಲಾಗದೋ, ಯಾರು ಯಾವುದನ್ನು ಸೂಕ್ತ ಕಾರಣವಿಲ್ಲದೆ ತಡೆಹಿಡಿಯಬಾರದೋ, ಯಾವುದನ್ನು ಉಲ್ಲಂಘಿಸಬಾರದೋ, ಅಂತಹ ಮಾನವೀಯ ವಿಚಾರಗಳು ಹಕ್ಕುಗಳ ರೂಪ ಪಡೆಯುತ್ತದೆ.
ಮಾನವನ ಮೂಲಭೂತ ಸ್ವಾತಂತ್ರ್ಯವನ್ನು ಪರಿಗಣಿಸುವಾಗ ಅದರ ಜೊತೆಜೊತೆಯಾಗಿ ಮಾನವ ಹಕ್ಕುಗಳನ್ನು ಪರಿಗಣಿಸಬೇಕು. ಪ್ರಜಾಪ್ರಭುತ್ವದಲ್ಲಿ ನಂಬಿಕೆ ವಿಶ್ವಾಸಗಳನ್ನು ಇಟ್ಟಿರುವವರಾದರೋ ಮಾನವ ಹಕ್ಕುಗಳನ್ನು ಮರೆಯಲೇ ಆಗದು. ಎಲ್ಲರೂ ಉಳಿದು ಬೆಳೆಯಲು, ಶಾಂತಿ ನೆಮ್ಮದಿಯಿಂದ ಬಾಳಲು ಮೂಲಭೂತವಾದ ಮಾನವ ಹಕ್ಕುಗಳನ್ನು ಮುಂದಿಟ್ಟುಕೊಳ್ಳೇಬೇಕು. ಮಾನವರು ಎಂದಾಗ ಅದರಲ್ಲಿ ಮಕ್ಕಳೂ ಅವಿಭಾಜ್ಯ ಅಂಗ. ಯಾವುದೇ ಸಮಾಜ ತಮ್ಮ ಮಕ್ಕಳು ಹಾಳಾಗಲಿ ಎನ್ನುವುದಿಲ್ಲ. ಹಾಗಿರುವಾಗ ಸಮಾಜದ ಮಕ್ಕಳು ಮುರುಟಿ ಹೋಗಲಿ ಎನ್ನುವುದು ಸಲ್ಲ.

ಕೊಡುವುದು – ತೆಗೆದುಕೊಳ್ಳುವುದು

ಕೊಡುವವರು ಯಾರು? – "ಉಳ್ಳವರು" ಕೊಟ್ಟರೆ ತೆಗೆದುಕೊಳ್ಳುವವರು ಯಾರು? – "ಇಲ್ಲದವರು" ಅಥವಾ ಯಾರಿಗೆ ಅದು ಬೇಕೋ ಅವರು. ಕೊಡುವವರು ಇರುವ ತನಕ ತೆಗೆದುಕೊಳ್ಳುವವರೂ ಇರುತ್ತಾರೆ. ಇದನ್ನು ತಿರುಗು – ಮುರುಗು ಮಾಡಿಯೂ ಹೇಳಬರುತ್ತದೆ. ಇಲ್ಲಿ ಯಾರಿಂದ ಯಾರ ಸೃಷ್ಟಿ? ಇದೊಂದು ಸದಾ ಕಾಲಕೂ ಉಳಿಯುವ ಪ್ರಶ್ನೆ.
ಯಾರಾದರೂ ಏನನ್ನಾದರೂ ಕೂಡಿಡುವುದು ತಾವು ಕೊಡುವವರಾಗಲೆಂದೇ ಇರಬಹುದು, ಕೊಡುವವರಿಗೆ 'ಕೊಡುವುದರಲ್ಲಿ' ಸುಖ ಅಭ್ಯಾಸವಾದಂತೆ, ತೆಗೆದುಕೊಳ್ಳುವವರಲ್ಲಿಯೂ 'ತೆಗೆದುಕೊಳ್ಳುವ' ಅಭ್ಯಾಸ ಬೆಳೆಯುತ್ತದೆ. ಆಗ ತೆಗೆದುಕೊಳ್ಳುವವನಲ್ಲಿ ತನಗೆ ವಾಸ್ತವವಾಗಿ ದೊರಕಲೇಬೇಕಾದುದನ್ನು ಗುರುತಿಸುವ, ಆ

ಮೂಲಕ ನ್ಯಾಯಬದ್ಧವಾಗಿ ಅದು ತನಗೆ ದೊರಕಲೇಬೇಕೆಂದು ಬೇಡಿಕೆ ಇಡುವ, ಹಕ್ಕೊತ್ತಾಯ ಮಾಡುವ ಒಳಗಿನ ಪ್ರೇರಣೆ ಕಮರಿ ಹೋಗಬಹುದು.

ತನಗೆ ಇಂತಹುದನ್ನು ಪಡೆಯುವ ಸಹಜ ಹಕ್ಕಿದೆ ಎಂಬ ಪ್ರಜ್ಞೆ ಬೆಳೆದರೆ ಸಾಕು. ಈ ಕೊಡುವ , ತೆಗೆದುಕೊಳ್ಳುವ, ಬೇಡುವ, ನೀಡುವ (ಕೊಡುವವನ ಕೈ ಮೇಲೆ!) ಇಂಥ ಪ್ರಕ್ರಿಯೆಗೆ ಕೊನೆ ಬಂದೀತು. ತೆಗೆದುಕೊಳ್ಳುವವರು ಒಮ್ಮೆ ಎದ್ದು ನಿಂತು, ನೀವು ನಾವು ಜೊತೆಯಾಗಿ ಸಮಾನರಾಗಿಪಡೆದುಕೊಳ್ಳೋಣ ಎಂದಾಗ ಕೊಡುವುದನ್ನೇ ಅಭ್ಯಾಸ ಮಾಡಿಕೊಂಡವರಿಗೆ ತಮ್ಮದೇನನ್ನೋ ಕಳೆದುಕೊಂಡ ಅನುಭವವಾಗುವುದು ಅಸಹಜವೇನಲ್ಲ. ಆಗಲೇ ಕೊಡುವವರು ಕೊಟ್ಟೂ ಉಳಿಯುವ ಅಷ್ಟೊಂದನ್ನು ಅದು ಹೇಗೆ ತಮ್ಮದಾಗಿಸಿಕೊಂಡಿದ್ದಾರೆ ಎಂಬ ಗುಟ್ಟೂ ಸಹ ಬಯಲಾದೀತು. ಯಾವುದನ್ನಾದರೂ ತಿಳಿಯುವ ತನಕ ಅದಕ್ಕೊಂದು ತೆರೆ ಬಿದ್ದಂತೆ ಇರುತ್ತದೆ. ತೆರೆ ಸರಿಸಿದರೆ ಅರಿವಾಗುತ್ತದೆ. ಒಂದು ವಿಷಯ, ವಿಚಾರ, ವಸ್ತು ನಮ್ಮದಾದ ಮೇಲೆ ಅದರಿಂದ 'ಹೂ ಕನಸುಗಳ ರಮ್ಯಲೋಕ' ಅಥವಾ 'ರಾಕ್ಷಸ ಹಿಂಸೆಯ' ಸೃಷ್ಟಿ. ಎರದೂ ಹೊಸತೇ. ಎಲರಡರ ಮೇಲೂ ತಿಳಿದವರದೇ ಹತೋಟಿ. ಹತೋಟಿ ಕೈ ತಪ್ಪಿದಾಗ ಅಥವಾ ಬೇರೆಯವರ ಅದೀನಕ್ಕೆ ಬಂದಾಗ ಪ್ರತಿಕ್ರೀಯೆಯಾಗಿ ಬೇರೆಯೇ ರೀತಿಯ ಪ್ರಕ್ರಿಯೆ ಆರಂಭವಾಗುತ್ತದೆ.

ನಾವು ಕೊಡುವವರೂ ಆಗದೇ ತೆಗೆದುಕೊಳ್ಳುವವರೂ ಆಗದೇ, ಸಮಾನರಾಗಿ ಪರಸ್ಪರಾವಂಬಿಗಳಾಗಿ ರಕ್ಷಕರಾಗಿ ಬೆಳೆಸುವವರಾಗಬೇಕು. ಹಾಗಾದಾಗ 'ಹಕ್ಕುಗಳು' ಅಂತಹ ಸಮಾಜದ ನವಸೃಷ್ಟಿಗೆ ನೆರವಾಗುತ್ತದೆ. ಹಕ್ಕುಗಳನ್ನು ಯಾರು ಯಾರಿಗೂ ವಿಶೇಷವೆಂಬಂತೆ ಕೊಡಬೇಕಾಗಿಲ್ಲ, ಕೊಳ್ಳಬೇಕಾಗಿಲ್ಲ, ವಂಶಪಾರಂಪರ್ಯವೆಂಬಂತೆ ಗುರುತಿಸಿಕೊಂಡು ಬರಬೇಕಾಗಿಲ್ಲ. ಆಗ ಹಕ್ಕುಗಳು ಜನರಿಗೆ ಸೇರಿದ್ದಾಗುತ್ತವೆ. ಏಕೆಂದರೆ ಅದು 'ಮಾನವೀಯ ವಿಚಾರ'. ನಮ್ಮೊಡನೆ ಸದಾ ಜಾಗೃತವಾಗಿರಬೇಕಾದುದು ಮಾನವೀಯತೆ ಎಂದೇ ತಿಳಿಯಲು ಬೆಳೆಯಲು ಎಲ್ಲರಿಗೂ ಇರುವ ಸಮಾನ ಅವಕಾಶಗಳೇಹಕ್ಕುಗಳು ಎಂದರೆ ಸರಿಯೆನಿಸುತ್ತದೆ.

## ಮಕ್ಕಳ ಹಕ್ಕುಗಳ ದೃಷ್ಟಿಯ ಬಗ್ಗೆ ಏಕಿಷ್ಟು ದೊಡ್ಡ ದನಿ?

ಮಾನವೀಯ ವಿಚಾರಗಳು ಸಹಜ ಎಂದ ದನಿಯ ಬೆನ್ನಿಗೇ ಅಮಾನವೀಯ ಸಂಗತಿಗಳೂ ಇವೆ ಎಂಬುದೂ ಅಷ್ಟೇ ವಾಸ್ತವ. 'ನಾನು ನನ್ನಿಷ್ಟದಷ್ಟು ಪಡೆಯಬೇಕು, ಉಣ್ಣಬೇಕು, ಉಡಬೇಕು, ನಗಬೇಕು, ಮೆರೆಯಬೇಕು. ಇದಕ್ಕಾಗಿ ಉಳಿದವರು ಏನು ಕಳೆದುಕೊಂಡರೆ ನನಗೇನು? ನಾನು ನನಗೆ ಬೇಕಾದುದನ್ನು ದಕ್ಕಿಸಿಕೊಳ್ಳಲು ಆರ್ಥಿಕ, ಸಾಮಾಜಿಕ, ರಾಜಕೀಯ, ನ್ಯಾಯಾಂಗ ಹೀಗೆ ಹಲವಾರು ಬಲ ಪಡೆದಿದ್ದೇನೆ ಎನ್ನುವ ಒಂದು ಗುಂಪು – ಅದು ಸಾಹುಕಾರ, ಪಾಳೇಗಾರ, ಭೂಸ್ವಾಮಿ, ಗುತ್ತಿಗೆದಾರ, ಜನಪ್ರತಿನಿಧಿ, ಅಧಿಕಾರಿ, ಸರ್ಕಾರ, ರಾಜ ಹೀಗೆ ಹಲವು ರೂಪ ಪಡೆದಿರುತ್ತದೆ. ನಾನಷ್ಟೇ ಪಡೆಯುವುದಲ್ಲ, ನಿನಗೂ ಏನೋ ಒಂದಿಷ್ಟು ನೀಡುತ್ತೇನೆ ಎನ್ನುವಂತಹ ಕಲ್ಯಾಣ ಯೋಜನೆಗಳನ್ನು ಈ ಎಲ್ಲರೂ ಮಾಡುತ್ತಾರೆ. ಹೀಗೆ ಪರಿಣಾಮವನ್ನು ನಿರ್ದಿಷ್ಟವಾಗಿ ಅಳೆದು ನೋಡಲು ಸಿಗದ ಕಲ್ಯಾಣ ಯೋಜನೆಗಳನ್ನು ಸುಲಭವಾಗಿ ಯೋಜಿಸಿ, ಅತ್ಯಂತ

ಸಂಕೀರ್ಣವಾದ ವ್ಯವಸ್ಥೆ ಸೃಷ್ಟಿಸಿ ಜಾರಿ ಮಾಡುವುದು ಈ ಗುಂಪಿಗೆ ಸುಲಭ. ಇದರಲ್ಲಿ ನವೀನತೆಗೆ, ಹೊಸ ದೃಷ್ಟಿಕೋನಗಳಿಗೆ ಪ್ರವೇಶ ಅಷ್ಟೊಂದು ಸುಲಭವಲ್ಲ.

ತಮ್ಮ 'ಹಕ್ಕು' ಅರಿವಾಗಿ ತಮಗೆ ಇಂತಹುದೇ ವ್ಯವಸ್ಥೆ, ಇಂತಹುದೇ ನಿರ್ದಿಷ್ಟ ರೀತಿಯ, ನಿರ್ದಿಷ್ಟ ಗುಣಮಟ್ಟದ ಸೇವೆ ಸೌಲಭ್ಯ, ನಡವಳಿಕೆ ಸಿಗಬೇಕು ಎಂದು ಜನ ನಿರ್ಧರಿಸುವ ಕಲ್ಪನೆಯೇ ಮೇಲ್ಮಟ್ಟದಲ್ಲಿ ಅಧಿಕಾರ ಹಿಡಿದವರನ್ನು ಅಧೀರರನ್ನಾಗಿಸುತ್ತದೆ. ಹಾಗಾಗಿ ಸಾಮಾನ್ಯ ವಿಚಾರಗಳೂ ಸಹ ಅತ್ಯಂತ ನಿಗೂಢವೂ, ಅಭೇದ್ಯವೂ ಆಗಿಬಿಡುತ್ತವೆ.

ಹಳ್ಳಿಗೆ ಪಡಿತರ ರೂಪದಲ್ಲಿ ವಿತರಣೆಯಾಗಬೇಕಾದ ಅಕ್ಕಿ ಅದೇಕೆ ಬರಲೇ ಇಲ್ಲ ಎಂದು ಮಹಿಳೆಯರು ಪ್ರಶ್ನಿಸುವ, ಪ್ರಶ್ನಿಸಿ ನಿಜವಾದ ಕಾರಣವನ್ನುಅರಿಯುವ ಮಟ್ಟಕ್ಕೆ ಬಂದರೆ ಪಟ್ಟಭದ್ರ ಹಿತಾಸಕ್ತಿಗಳಿಗೆ ಇರಿಸುಮುರಿಸಾಗದಿದ್ದೀತೆ? ಜನ್ಮ ದಾಖಲೆಪತ್ರ ಪಡೆಯಲು ವಿಪರೀತ ಹಣ ಖರ್ಚು ಮಾಡಬೇಕಿಲ್ಲ. ಹಳ್ಳಿಯಲ್ಲಿರುವ ಆರೋಗ್ಯ ಕೇಂದ್ರದಲ್ಲಿ ಉಚಿತವಾಗಿ ಔಷಧಿ ವಿತರಿಸಬೇಕು. ಶಾಲಾ ಮಕ್ಕಳು ಯಾವುದೇ ಶುಲ್ಕ ನೀಡಬೇಕಿಲ್ಲ ಹೀಗೆ ಪಟ್ಟಿ ಬೆಳೆಸಬಹುದು. ಇಂತಹ ಮಾಹಿತಿಗಳನ್ನು ಜನರಿಗೆ ತಲುಪಿಸದಂತೆ ಮಾಡುವ, ಪ್ರಶ್ನೆಯೇ ಕೇಳದಂತಹ ವಾತಾವರಣ ಸೃಷ್ಟಿಸಿಬಿಟ್ಟರೆ ಆಯಿತಲ್ಲ! ಇದು ಪಟ್ಟಭದ್ರ ಹಿತಾಸಕ್ತಿಗಳ ಹಿತಗಳ ದೃಷ್ಟಿ. ಅದೇ ದೆಸೆಯಲ್ಲಿ ಅವರ ಪ್ರಯತ್ನ. ಇವೆಲ್ಲವುಗಳ ಒಟ್ಟು ರೂಪವೇ ಹಕ್ಕುಗಳ ವಂಚನೆ, ಅವುಗಳ ಉಲ್ಲಂಘನೆ. ನನಗೇಕೆ ಬಾಯಿಕಟ್ಟಿದೆ, ನನ್ನ ಕೈಕಾಲುಗಳೇಕೆ ಬಂಧಿಸಲ್ಪಟ್ಟಿವೆ, ಎಲ್ಲಕ್ಕಿಂತ ಮಿಗಿಲಾಗಿ ನನ್ನ ಮನಸ್ಸಿಗೂ ಬೇಲಿ ಬಿದ್ದಿದೆಯೇ ಎಂಬ ಪ್ರಶ್ನೆಗಳು ಆಲೋಚಿಸುವ ಎಲ್ಲರಲ್ಲೂ ಪುಟಿದೇಳುವುದು ಸಹಜ. ಇಂತಹ ಪ್ರಶ್ನೆಗಳನ್ನೂ ಬಹಳ ಹಿಂದೆಯೂ ಜನ ಕೇಳಿದ್ದಾರೆ. ಈಗಲೂ ಕೇಳುತ್ತಿದ್ದಾರೆ. ಈಗ ಅಂತಹ ಪ್ರಶ್ನೆಗಳಿಗೆ ವಿಶೇಷವಾಗಿ ಮನ್ನಣೆ ಬಂದಿದೆ. ಹಕ್ಕು ಎಂಬುದು ಕೇವಲ ಕೆಲವೇ ಕೆಲವರ ಸ್ವತ್ತಲ್ಲ ಎಂಬುದು ಸ್ಪಷ್ಟವಾಗುತ್ತಿದೆ.

**ಹಕ್ಕುಗಳಿಂದ ವಂಚಿತರಾದವರು:**

'ವಿಚಾರ' ತಿಳಿಯದವರು, 'ದೈಹಿಕವಾಗಿ ದುರ್ಬಲ'ರಾದವರು, ಪಾರಂಪರಿಕವಾಗಿ, ಸಾಮಾಜಿಕ ಕಟ್ಟಳೆಗಳ ಸೃಷ್ಟಿಯಿಂದಾಗಿ ಮೂಲೆಗುಂಪಾದವರು, ಅನಪೇಕ್ಷಿತ ತಾರತಮ್ಯದ ನೆರಳಲ್ಲಿ ಹಿಂದೆ ಸರಿಸಲ್ಪಟ್ಟವರು, ಲಿಂಗಾಧಾರಿತ ಶ್ರೇಣಿ, ಜಾತಿ, ವೃತ್ತಿ ಇವೆಲ್ಲವುಗಳ ಹೆಸರಲ್ಲಿ ಮೂಲೆಗೆ ತಳ್ಳಲ್ಪಟ್ಟವರು ಬಹು ಸುಲಭವಾಗಿ ಹಕ್ಕುಗಳಿಂದ ವಂಚಿತರಾಗಿದ್ದಾರೆ.

ಎಲ್ಲ ದೇಶಗಳಲ್ಲಿ ಎಲ್ಲ ಕಾಲಗಳಲ್ಲಿ ಮಹಿಳೆಯರು, ಮಕ್ಕಳು, ಆರ್ಥಿಕವಾಗಿ ಬಲವಿಲ್ಲದವರು, ನೆಲೆ ಇಲ್ಲದವರು, ಮಾಹಿತಿ ಇಲ್ಲದವರು, ಅಂಗವಿಕಲತೆ ಉಳ್ಳವರು, ರಾಜಕೀಯವಾಗಿ ಸಂಘಟಿತರಾಗದವರು ತುಳಿಯಲ್ಪಡುವುದು ನಡೆಯುತ್ತಲೇ ಇದೆ. 'ಇದು ಏಕೆ ಹೀಗೆ, ಇದರಿಂದ ಹೊರಬರುವುದು ಹೇಗೆ' ಎಂಬ ಪ್ರಶ್ನೆಗಳಿಗೆ ಉತ್ತರ ದೊರೆತರೆ, ಇವರೆಲ್ಲರಿಗೆ ಬಂಧನದಿಂದ ಬಿಡುಗಡೆ ಸಾಧ್ಯ. ಇಂತಹ ಪ್ರಶ್ನೆಗಳಿಗೆ ಉತ್ತರ ಪಡೆಯುವುದು, ಅದರಂತೆ ನಡೆದುಕೊಳ್ಳುವುದು ತಮ್ಮ ಹಕ್ಕು ಎಂಬ ಪ್ರಜ್ಞೆ ಬೆಳೆಯಬೇಕಾಗಿರುವುದು, ಬೆಳೆಸಬೇಕಾಗಿರುವುದು ಈಗಿನ ತುರ್ತು.

ವಂಚಿತರ, ದಲಿತರ, ನಿರ್ಬಲರ, ಅಜ್ಞರ ಹಿತದೃಷ್ಟಿಯಿಂದ ನಿರ್ಧಾರಗಳನ್ನು ಕೈಗೊಳ್ಳುವಾಗ, ಕಾನೂನು ರಚಿಸುವಾಗ, ಆಡಳಿತ ನಿರ್ವಹಣೆ ಮಾಡುವಾಗ, ಯೋಜನೆ ರೂಪಿಸುವಾಗ ಸಹಾನುಭೂತಿಯಿಂದ ಕೂಡಿ ಮುಂದಿನ ಸಮಾಜದ, ಪೀಳಿಗೆಯ ಆರೋಗ್ಯಕರ ಬೆಳವಣಿಗೆಯನ್ನು ಗಮನದಲ್ಲಿಟ್ಟುಕೊಂಡರೆ 'ಹಕ್ಕು' ಹೊಸ ಬೆಳಕಿನಲ್ಲಿ ಅರ್ಥ ಪಡೆಯುತ್ತದೆ.

**ಮಕ್ಕಳ ಹಕ್ಕುಗಳ ದೃಷ್ಟಿ:**

ಎಲ್ಲ ಕಾಲದಲ್ಲಿಯೂ, ಎಲ್ಲ ದೇಶಗಳಲ್ಲಿಯೂ ಮಕ್ಕಳು ಇದ್ದೇ ಇರುತ್ತಾರೆ. ಇದನ್ನು ಇನ್ನೂ ಮುಂದುವರೆಸಿ ಹೇಳಿದರೆ, ಎಲ್ಲ ಭಾಷೆ, ಬಣ್ಣ, ರಾಜಕೀಯ ನಿಲುವುಗಳು, ಜ್ಞಾನ, ವ್ಯವಸ್ಥೆ, ಸೌಲಭ್ಯ ಹೀಗೆ ಯಾವುನೇ ಸಂಗತಿಯನ್ನು ಗಮನಿಸಿದರೂ ಮಕ್ಕಳಿದ್ದಾರೆ. ನಮ್ಮ ಮಕ್ಕಳು 'ನಾಳೆ' ನಮ್ಮೆಲ್ಲರ ವಾರಸುದಾರರು, ಸಮಾಜವನ್ನು ಮುನ್ನಡೆಸುವವರು ಎಂಬುದು ಎಲ್ಲರ ಗಟ್ಟಿನಂಬಿಕೆ. ಹೀಗಾಗಿ ನಾವು ನಮ್ಮ ಮಕ್ಕಳಿಗಾಗಿ ಕಷ್ಟಪಡುತ್ತೇವೆ. ಅವರ ಸುಖ ಸಂತೋಷ ನೆಮ್ಮದಿಗಳಿಗಾಗಿ ತೊಳಲಾಡುತ್ತೇವೆ. ಹೀಗೆ ಸಾಗುವ ಬಹುತೇಕರಿಗೆ ತಮ್ಮ ಬದುಕಿನ ದಾರಿಯಲ್ಲಿ ಬರುವ 'ಬೇರೆಯವರ' ಮಕ್ಕಳ ಬಗ್ಗೆ ದಿವ್ಯ ನಿರ್ಲಕ್ಷ್ಯ. ಈ ಮನೋಭಾವದಿಂದಾಗಿಯೇ ನಾವೇ 'ಮಕ್ಕಳ ಹಕ್ಕುಗಳ ಉಲ್ಲಂಘನೆ' ಮಾಡುತ್ತಿದ್ದೇವೆ.

'ಎಲ್ಲ ಮಕ್ಕಳ ಹಿತದೃಷ್ಟಿ' – ಮಕ್ಕಳ ಹಕ್ಕುಗಳ ಜಾರಿಗೆ ಇದೇ ಮೊದಲ ಕ್ರಮ. ಎಲ್ಲ ಮಕ್ಕಳಿಗೂ ಬದುಕಲು, ಬೆಳೆಯಲು, ವಿಕಾಸ ಹೊಂದಲು, ಅವಕಾಶಗಳನ್ನು ಪಡೆಯಲು, ನಮ್ಮನಮ್ಮ ಮಟ್ಟದಲ್ಲಿ ಕೈಗೊಳ್ಳಬೇಕಾದ ನಿರ್ಧಾರ, ಕ್ರಮ, ಮನೋಭಾವವೇ ಮಕ್ಕಳ ಹಕ್ಕುಗಳ ದೃಷ್ಟಿಕೋನ. 'ಮಕ್ಕಳು ಸಹಜವಾಗಿಯೇ ಹಕ್ಕುಗಳನ್ನು ಹೊಂದಿರುತ್ತಾರೆ.' ಅವುಗಳನ್ನು ಆ ಮಕ್ಕಳಿಗೆ ತಲುಪಿಸಲು ನಾನು ವೈಯಕ್ತಿಕವಾಗಿ, ಸಾಂಗಿಕವಾಗಿ ಮಾಡಬೇಕಾದುದು ಏನು ಎಂದು ಮುಂದಡಿಯಿಟ್ಟಾಗಲೇ ಆ ಹಕ್ಕುಗಳ ಜಾರಿ ಸಾಧ್ಯ.

ನಮ್ಮ ಸರ್ಕಾರಿ ಇಲಾಖೆಗಳ ಹಿನ್ನೆಲೆಯಲ್ಲಿ ನೋಡಿದಾಗ, ಮಕ್ಕಳಿಗೆ ಸಂಬಂಧಿಸದ ಯಾವುದಾದರೂ ಇಲಾಖೆ ಇದೆಯೇ ಎಂದು ಸೂಕ್ಷ್ಮದರ್ಶಕ ಹಿಡಿದು ಪರೀಕ್ಷಿಸಬೇಕಾದೀತು. ಮಕ್ಕಳನ್ನು ದೇಶದ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಎಲ್ಲೋ ಒಂದು ಕೆಲಸಕ್ಕೆ ಬಂದೂ ಬಾರದ ಒಂದು ಭಾಗ ಎಂದು ನೋಡದೆ 'ಮಕ್ಕಳ ಕೇಂದ್ರಿತ' ದೃಷ್ಟಿ ಬೆಳೆಸಿಕೊಳ್ಳಬೇಕಾದುದು ಈಗ ತುಂಬ ಮುಖ್ಯವಾಗಿದೆ.

**ಮಕ್ಕಳ ಹಕ್ಕುಗಳ ಜಾರಿ ನಿಗಾ ಕೇಂದ್ರ:**

ಮಕ್ಕಳ ಹಕ್ಕುಗಳ ಜಾರಿ ಜವಾಬ್ದಾರಿ ಪ್ರತಿಯೊಬ್ಬ ವಯಸ್ಕರು, ಸರ್ಕಾರ, ಜನಪ್ರತಿನಿಧಿಗಳು ಮತ್ತು ಉದ್ಯಮಗಳದ್ದು. ಮಕ್ಕಳಿಗೆ ಸಂಬಂಧಿಸಿದ ನೂರಾರು ಯೋಜನೆ, ಕಾರ್ಯಕ್ರಮಗಳು ಪ್ರತಿ ಸರ್ಕಾರದ ಪ್ರಕಟನೆಗಳಲ್ಲಿ ಇರುತ್ತವೆ. ಅದೇ ರೀತಿ ಅನೇಕ ಖಾಸಗಿ ಉದ್ದಿಮೆಗಳು, ಸಂಘಟನೆಗಳೂ ಅನೇಕ ಯೋಜನೆಗಳನ್ನು ಹಾಕಿಕೊಂಡಿರುತ್ತವೆ. ಪ್ರತಿವರ್ಷ ಸಾವಿರಾರು ಕೋಟಿ ರೂಪಾಯಿಗಳ ಇಂತಹ ಕೆಲಸಗಳು ನಡೆಯುತ್ತಿವೆ ಎಂದೂ ವರದಿಯಾಗುತ್ತಿರುತ್ತವೆ. ಆದರೆ, ಇಂತಹವುಗಳು ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಕಷ್ಟವೇ ಸರಿ.

ಮಕ್ಕಳ ಹಕ್ಕುಗಳಿಗಾಗಿ ನಡೆದಿರುವ ಎಲ್ಲ ರೀತಿಯ ಕಾರ್ಯಕ್ರಮ, ಯೋಜನೆಗಳ ಜಾರಿ ಉಸ್ತುವಾರಿ ಉದ್ದೇಶದಿಂದ ಹಲವು ಸಂಸ್ಥೆಗಳೊಡನೆ ಚೈಲ್ಡ್ ರೈಟ್ಸ್ ಟ್ರಸ್ಟ್, 'ಮಕ್ಕಳ ಹಕ್ಕುಗಳ ಜಾರಿ ನಿಗಾ ಕೇಂದ್ರ'ವನ್ನು ನಡೆಸುತ್ತಿದೆ. ಮಕ್ಕಳಿಗೆ ಸಂಬಂಧಿಸಿದ ಕೆಲವು ನಿರ್ದಿಷ್ಟ ಕ್ಷೇತ್ರಗಳಲ್ಲಿ ಅಧ್ಯಯನ, ಮಾಹಿತಿ ಸಂಗ್ರಹ, ಮಾಹಿತಿ ವಿಶ್ಲೇಷಣೆ, ತರಬೇತಿ, ವಕೀಲಿ ಕೆಲಸಗಳಲ್ಲಿ ನಿಗಾ ಕೇಂದ್ರ ತೊಡಗಿದೆ. ಕರ್ನಾಟಕದಲ್ಲಿ ಇದೊಂದು ಹೊಸ ಪ್ರಯತ್ನ.

ಮಕ್ಕಳ ಪರಿಸ್ಥಿತಿಗಳ ಬಗ್ಗೆ ನಿಗಾ ಕೇಂದ್ರದೊಡನೆ ಎಲ್ಲರೂ ಮಾಹಿತಿ ಹಂಚಿಕೊಳ್ಳಬಹುದು. ಅದೇ ರೀತಿ ರಾಜ್ಯದ ಮಕ್ಕಳನ್ನು ಕುರಿತು ಮಾಧ್ಯಮಗಳಲ್ಲಿ ಬರುವ ವರದಿ ಲೇಖನಗಳ ಸಮೀಕ್ಷೆ ಮಾಹಿತಿ ಪಡೆಯಲು ಅಪೇಕ್ಷಿಸುವವರು ಚೈಲ್ಡ್ ರೈಟ್ಸ್ ಟ್ರಸ್ಟನ್ನು ಸಂಪರ್ಕಿಸಬಹುದು.

**ಮಕ್ಕಳ ಹಕ್ಕುಗಳು – ಮಕ್ಕಳ ಏಳ್ಗೆಗಾಗಿ ಒಂದು ಅಸ್ತ್ರ:**

ಮಕ್ಕಳ ಹಕ್ಕುಗಳ ಬಗ್ಗೆ ಮಾತನಾಡುತ್ತಿರುವ ನಾವು ಸಮಾಜಸೇವೆ, ಸಮಾಜಕಾರ್ಯಗಳಿಂದ ಮುಂದಕ್ಕೆ ಯೋಚಿಸಲೇ ಬೇಕು ಮತ್ತು ಕಾರ್ಯೋನ್ಮುಖರಾಗಬೇಕು. ಕೇವಲ ಸೇವೆಗಳನ್ನು ನೀಡುವುದು ಮತ್ತು ಸೌಕರ್ಯಗಳನ್ನು ಮಾಡಿಕೊಡುವುದರಲ್ಲಿ ತೃಪ್ತಿ ಕಾಣುತ್ತಿದ್ದರೆ, ಸಮಾಜದಲ್ಲಿ ಬದಲಾವಣೆಗೆ ನಾವು ಇನ್ನೂ ಸಾವಿರಾರು ವರ್ಷ ಕಾಯಬೇಕಾದೀತು. ಮಕ್ಕಳ ಹಕ್ಕುಗಳ ಜಾರಿಯಲ್ಲಿ ಸರಕಾರ ಮತ್ತು ಸಮಾಜ ಎರಡು ಸಹ ಜಂಟಿ ಜವಬ್ದಾರಿಯನ್ನು ತೆಗೆದುಕೊಳ್ಳಬೇಕು. ಅದಕ್ಕಾಗಿ ನಾವು ಮಕ್ಕಳ ಹಕ್ಕುಗಳ ಜಾರಿಗಾಗಿ ವಕೀಲಿ ಮತ್ತು ಆಂದೋಲನದ ಕೆಲಸಗಳನ್ನು ಅರ್ಥಬದ್ಧವಾಗಿ ಮಾಡಬೇಕು. ಇದಕ್ಕಾಗಿ ನಾವು ಮಕ್ಕಳ ಸ್ಥಿತಿಗತಿಯನ್ನು ಅಂಕಿ ಅಂಶಗಳು ಮತ್ತು ವಾಸ್ತವ ಅಂಶಗಳ ಹಿನ್ನಲೆಯಲ್ಲಿ ತಿಳಿಯಬೇಕು.

ಇಂತಹ ಕೆಲಸವನ್ನು ಎಗ್ಲಾಂಟೈನ್ ಜೆಬ್ ೧೯೨೩ರಲ್ಲೆ ನಡೆಸಿದ್ದರು. ಸೇವ್ ದ ಚಿಲ್ಡ್ರನ್ ಸಂಸ್ಥೆಯ ವಕೀಲಿ ವಿಭಾಗದ ಒತ್ತಾಸೆಯಿಂದಾಗಿ ಮಕ್ಕಳ ಹಕ್ಕುಗಳ ಘೋಷಣೆ ಹೊರಬಿದ್ದಿತು. ಅದರ ವಿಚಾರವನ್ನೆ ಲೀಗ್ ಆಫ್ ನೇಷನ್ ಒಪ್ಪಿಕೊಂಡಿತು. ಇದಾಗಿ ೬೫ ವರ್ಷಗಳ ನಂತರ ಮಕ್ಕಳ ಹಕ್ಕುಗಳ ಒಡಂಬಡಿಕೆಯನ್ನು ವಿಶ್ವಸಂಸ್ಥೆ ೧೯೮೯ ರಲ್ಲಿ ಅಳವಡಿಸಿಕೊಂಡಿತು. ಮಕ್ಕಳ ಹಕ್ಕುಗಳನ್ನು ಕುರಿತು ಕೆಲಸ ಮಾಡುತ್ತಿರುವವರಿಗೆ ಈ ಮೂಲಕ ಒಂದು ಅಧೀಕೃತ ಸಾಧನವನ್ನು ವಕೀಲಿ ಕೆಲಸಗಳಿಗಾಗಿಯೇ ನೀಡಲಾಗಿದೆ ಎನ್ನಬಹುದು. ಮಕ್ಕಳ ಹಕ್ಕುಗಳ ಒಡಂಬಡಿಕೆ ಕೇವಲ ಓದಿಕೊಂಡು ತಿಳಿದುಕೊಳ್ಳಲೆಂದು ಇರುವ ಒಂದು ಹಸಿ ದಾಖಲೆಯಲ್ಲ. ಅದೊಂದು ಅಸ್ತ್ರ. ಅದರಲ್ಲಿ ಎಲ್ಲವೂ ಅಡಗಿದೆ. ಮಕ್ಕಳ ಸ್ಥಿತಿಗತಿಯನ್ನು ಹೇಗೆ ತಿಳಿದುಕೊಳ್ಳಬೇಕು, ಅದನ್ನು ಬಗೆಹರಿಸಲು ಏನು ಮಾಡಬೇಕು, ಉತ್ತಮವಾಗಿರುವುದನ್ನು ಹೇಗೆ ಯಾರ ಸಹಕಾರದಿಂದ ಮುಂದುವರಿಸಿಕೊಂಡು ಹೋಗಬೇಕು. ಇದರಲ್ಲಿ ಸರಕಾರ, ಸಮಾಜ, ಖಾಸಗಿ ರಂಗದ ಪಾತ್ರವೇನು, ಸ್ವಯಂಸೇವಾ ಸಂಘಟನೆಗಳು ಏನು ಮಾಡಬೇಕು, ಕುಟುಂಬದ ಸದಸ್ಯರ ಜವಬ್ದಾರಿ ಏನು ಎಂದೂ ವಿವರಿಸುವ ಈ ಒಡಂಬಡಿಕೆ, ಸ್ವಯಂಸೇವಾ ಸಂಘಟನೆಗಳಿಗೆ ಒಂದು ಪ್ರಮುಖವಾದ ಜವಬ್ದಾರಿ ನೀಡಿದೆ.

ಅದು, ಮಕ್ಕಳ ಹಕ್ಕುಗಳ ಒಡಂಬಡಿಕೆಯಲ್ಲಿನ ವಿಚಾರಗಳನ್ನು ಒಪ್ಪಿದ ಸರಕಾರ ಅದನ್ನು ಹೇಗೆ ನಿರ್ವಹಿಸುತ್ತಿದೆ ಎಂದು ಪರಿಶೀಲಿಸುವ ಮತ್ತು ಅದನ್ನು ಕುರಿತು ನಿಷ್ಪಕ್ಷಪಾತವಾಗಿ ವರದಿ ಮಾಡುವ ಕೆಲಸ.

ಈ ಕೆಲಸ ಮಾಡಲು ಯಾರೂ ಸಹ ಯಾರನ್ನೂ ನೇಮಿಸಬೇಕಿಲ್ಲ. ನಮಗೆ ಇಡೀ ದೇಶವನ್ನು ಅವಲೋಕಿಸಿ ನೋಡುವ ಸಾಮರ್ಥ್ಯವು ಇರುವುದಿಲ್ಲ. ನಾವು ಕೆಲಸ ಮಾಡುವ ಸಣ್ಣ ಪುಟ್ಟ ಪ್ರಾಂತ್ಯಗಳನ್ನೆ ಪರೀಕ್ಷಕ ದೃಷ್ಟಿಯಿಂದ ನೋಡಿ ಮಕ್ಕಳಿಗೆ ಸಂಬಂಧಿಸಿದ ವಿವಿಧ ಅಭಿವೃದ್ಧಿ ಸೂಚಕಗಳನ್ನು ಇಟ್ಟುಕೊಂಡು ಮಕ್ಕಳ ಹಕ್ಕುಗಳ ಜಾರಿ ಅಥವಾ ಉಲ್ಲಂಘನೆ ಕುರಿತು ವರದಿಗಳನ್ನು ತಯಾರಿಸಬಹುದು. ಮಕ್ಕಳ ಹಕ್ಕುಗಳನ್ನು ಜಾರಿ ಮಾಡುವ ನಿರ್ವಹಿಸುವ ಜವಬ್ದಾರಿ ಹೊತ್ತಿರುವ ಜನ, ಸಿಬ್ಬಂದಿ ಇತ್ಯಾದಿಗಳು ಹಕ್ಕುಗಳನ್ನು ಹೊಂದಿರುವವರೊಡನೆ ಹೇಗೆ ವರ್ತಿಸುತ್ತಾರೆ, ಹೇಗೆ ಸೇವೆಗಳನ್ನು, ಎಂತಹ ಗುಣಮಟ್ಟದಲ್ಲಿ ನೀಡುತ್ತಿದ್ದಾರೆ ಎಂದು ಗಮನಿಸಿ ಮಕ್ಕಳ ಉಳಿವು, ರಕ್ಷಣೆ, ಅಭಿವೃದ್ಧಿ ಮತ್ತು ಭಾಗವಹಿಸುವಿಕೆಯ ಹಕ್ಕುಗಳನ್ನು ಕುರಿತು ವರದಿಗಳನ್ನು ತಯಾರಿಸಿ ಸಂಬಂಧಿಸಿದವರಿಗೆ ನೀಡಬಹುದು ಮತ್ತು ಅದನ್ನೆ ಆಧಾರವಾಗಿಟ್ಟುಕೊಂಡು ನಿಶ್ಚಿತ ಕಾಲಾವದಿಗಳಲ್ಲಿ ಪರಿಸ್ಥಿತಿಯಲ್ಲಿ ಬದಲಾವಣೆಗಳಾಗುವುದನ್ನು ಗಮನಿಸಬೇಕು ಮತ್ತು ಪರಿಸ್ಥಿತಿಯಲ್ಲಿ ಉತ್ತಮಿಕೆ ಕಾಣಬರದಿದ್ದರೆ ಕೈಗೊಳ್ಳಬೇಕಾದ ಕ್ರಮಗಳತ್ತ ಸಂಬಂಧಿಸಿದವರನ್ನು ಸೆಳೆಯಬೇಕು.

**ಶಿಕ್ಷಣದಿಂದಲೇ ಬಾಲಕಾರ್ಮಿಕ ಪದ್ಧತಿ ಕೊನೆಗಾಣಿಸಲು ಸಾಧ್ಯ:**

ಶಾಲೆಯಿಂದ ಹೊರಬಿದ್ದ ಅಥವಾ ಶಾಲೆಗೆ ಸೇರದ ಮಕ್ಕಳು ಬಾಲಕಾರ್ಮಿಕರಾಗುತ್ತಾರೆ. ಅವರಿಗೆ ಭವಿಷ್ಯವೆ ಇರುವುದಿಲ್ಲ, ಈ ರೀತಿ ಅರ್ಥೈಸುವಿಕೆ ಸಂಬಂಧಿತ ಸರಕಾರದ ಇಲಾಖೆಗಳಲ್ಲೂ ಇತ್ತೀಚಿಗೆ ಕಂಡುಬರುತ್ತಿದೆ.

ಬಾಲಕಾರ್ಮಿಕ ಪದ್ಧತಿ ವಿರೋಧಿಸುತ್ತಿರುವ ಸಂಘಟನೆಗಳು, ಆಂದೋಲನಗಳು ಈ ವ್ಯಾಖ್ಯಾನವನ್ನೆ ಕಳೆದ ಮುರನ್ನಾಲು ದಶಕಗಳಿಂದ ಪ್ರತಿಪಾದಿಸುತ್ತಿರುವುದು. ಅನೇಕ ಸ್ವಯಂಸೇವಾ ಸಂಸ್ಥೆಗಳು ಶಿಕ್ಷಣ ವ್ಯವಸ್ಥೆ ಮಾಡಿ ಮಕ್ಕಳನ್ನು ಬಾಲಕಾರ್ಮಿಕ ಪದ್ಧತಿಯಿಂದ ಹೊರತರುವಲ್ಲಿ ಯಶಸ್ವಿ ಪ್ರಯೋಗಗಳನ್ನು ತೋರಿಸಿದ್ದಾರೆ. ಜೊತೆಗೆ ಶಿಕ್ಷಣ ಇಲಾಖೆಯು ರಾಜ್ಯಾದ್ಯಂತ ೧೯೯೦ರಿಂದೀಚೆಗೆ ಜಾರಿಗೆ ತಂದಿರುವ ಹಲವಾರು ಯೋಜನೆ, ಕಾರ್ಯಕ್ರಮಗಳ ಪ್ರಭಾವ ಕೆಲವು ಪ್ರದೇಶಗಳಲ್ಲಿ ಮಕ್ಕಳು ಶಾಲೆಗೆ ಬರುವ ಸಂಖ್ಯೆಯಲ್ಲಿ ಹೆಚ್ಚಳ ತೋರಿಸಿದೆ. ಆದರೆ. ಶಾಲೆಗೆ ದಾಖಲಾದವರ ಸಂಖ್ಯೆ ಮತ್ತು ಹಾಜರಾಗುತ್ತಿದ್ದಾರೆಂದು ಹೇಳುವ ಸಂಖ್ಯೆಯ ಹೆಚ್ಚಳವನ್ನೆ ಎಲ್ಲಾ ಮಕ್ಕಳು ಶಾಲೆಗೆ ಬರುತ್ತಿದ್ದಾರೆಂಬ ಭ್ರಮೆಯಲ್ಲಿ ಹೇಳುವುದು ತಪ್ಪೆಂದು ತೋರುತ್ತದೆ. ಶಾಲೆಗಳಲ್ಲಿ ಅಧಿಕವಾಗಿ ಕಂಡುಬರುವ ಮಕ್ಕಳ ಸಂಖ್ಯೆ, ನಿಜವಾಗಿಯೂ ಶಾಲೆಯಿಂದ ದೂರವಿರುವ ಮಕ್ಕಳನ್ನು ಮರೆಮಾಚುತ್ತಿರಬಹುದು.

ಎಲ್ಲಿಯವರೆಗೆ ಮಕ್ಕಳು ದುಡಿಯುತ್ತಿರುತ್ತಾರೊ ಅಲ್ಲಿಯವರೆಗೆ ದುಡಿಮೆಗೆ ನೀಡುವ ಕೂಲಿದರದಲ್ಲಿ ಹೆಚ್ಚಳವಾಗುವುದೇ ಇಲ್ಲ. ಕಡಿಮೆ ಕೂಲಿಗೆ ಮಕ್ಕಳು ಕೆಲಸಗಳಿಗೆ ದೊರೆಯುವುದರಿಂದ ಮಾಲಿಕರು ವಯಸ್ಕರನ್ನು ಕೆಲಸಗಳಿಗೆ ತೆಗೆದುಕೊಳ್ಳುವುದಿಲ್ಲ. ಕೃಷಿ, ಕೈಗಾರಿಕೆ, ಮನೆಗೆಲಸ, ಇತ್ಯಾದಿಗಳಲ್ಲಿ ಸಾಮಾನ್ಯ ವಯಸ್ಕರಿಗೆ

ರ್ದಾತ್ಮಕವಾದ ಹಾಗೂ ಸಮರ್ಪಕವಾದ ಕೂಲಿ ದೊರೆಯಬೇಕೆಂದರೆ ಮಕ್ಕಳು ದುಡಿಮೆಯ ಕ್ಷೇತ್ರದಿಂದ ೊರ ಹೋಗಲೇ ಬೇಕು. ಅನೇಕ ಕ್ಷೇತ್ರಗಳಲ್ಲಿ ವಯಸ್ಕರು ಕೆಲಸ ಮಾಡಲು ಹೆದರುತ್ತಾರೆ ಅಥವಾ ಂಜರಿಯುತ್ತಾರೆ. ಉದಾಹರಣೆಗೆ ಬೆಳೆಗೆ ಕೀಟನಾಶಕ ಹಾಕುವುದು, ತೀರಾ ದೊಡ್ಡ ಶಬ್ದ ಬರುವ ಕಡೆ, ಪಾಯಕಾರಿ ಎಣ್ಣೆಗಳ ಬಳಕೆ ಇತ್ಯಾದಿ. ಇಂತಹ ಪರಿಣಾಮಗಳ ಅರಿವಿಲ್ಲದ ಮಕ್ಕಳು ಕೆಲಸ ಮಾಡುತ್ತಾರೆ, ುಂದೆ ತೊಂದರೆ ಅನುಭವಿಸುತ್ತಾರೆ.

ಹೀಗಾಗಿ, ಶಿಕ್ಷಣದ ಹಕ್ಕನ್ನು ಪ್ರತಿಪಾದಿಸುವ ಮೂಲಕ, ಎಲ್ಲಾ ಮಕ್ಕಳು ಪೂರ್ಣಾವಧಿ ಶಿಕ್ಷಣದಲ್ಲಿ ೊಡಗಿದಲ್ಲಿ ಬಾಲಕಾರ್ಮಿಕ ಪದ್ಧತಿಯನ್ನು ಕೊನೆಗಾಣಿಸಲು ಸಾಧ್ಯ. ವಯಸ್ಕರ ಉದ್ಯೋಗದ ಮೂಲಕ ದೇಶದ ್ರಗತಿಯನ್ನು ಸಾಧಿಸಲು ಸಾಧ್ಯ.

**ಮಕ್ಕಳ ಉಚಿತ ಮತ್ತು ಕಡ್ಡಾಯ ಪ್ರಾಥಮಿಕ ಶಿಕ್ಷಣದ ಹಕ್ಕು ಕಾಯಿದೆ ೨೦೦೯:**

ಈ ಹೊಸ ಕಾಯಿದೆಯಂತೆ ೬-೧೪ ವರ್ಷದೊಳಗಿನ ಎಲ್ಲಾ ಮಕ್ಕಳು ಪೂರ್ಣಾವಧಿಯ ಶಾಲಾ ಶಿಕ್ಷಣದಲ್ಲಿ ತೊಡಗಿರಲೇ ಬೇಕು. ಯಾವುದಾದರೂ ಮಗು ಅಥವಾ ಮಕ್ಕಳ ಸಮೂಹಕ್ಕೆ ಈ ಕಾಯಿದೆಯಲ್ಲಿ ಸೂಚಿಸಿರುವಂತೆ ಶಿಕ್ಷಣ ಪಡೆಯಲು ತೊಂದರೆಯಾಗುತ್ತಿದೆ ಎಂದರೆ ಅದನ್ನು ಪರಿಶೀಲಿಸುವ ಜವಬ್ದಾರಿ ಕರ್ನಾಟಕ ರಾಜ್ಯ ಮಕ್ಕಳ ಹಕ್ಕುಗಳ ರಕ್ಷಣಾ ಆಯೋಗಕ್ಕಿದೆ. ಇಂತಹ ಪ್ರಕರಣಗಳನ್ನು ತನಿಖೆ ಮಾಡಿ ಮಕ್ಕಳಿಗೆ ಶಿಕ್ಷಣದ ವ್ಯವಸ್ಥೆಯನ್ನು ಮಾಡಲು ಮಕ್ಕಳಿಗೆ ಶಾಲೆಯಲ್ಲಿ ಯಾವುದೇ ಸಮಸ್ಯೆಗಳುಂಟಾಗದಂತೆ ರಕ್ಷಿಸಲು ಮಕ್ಕಳ ಹಕ್ಕುಗಳ ರಕ್ಷಣಾ ಆಯೋಗ ಶಿಫಾರಸ್ಸುಗಳನ್ನು ಮಾಡುವ ಅಧಿಕಾರ ಹೊಂದಿದೆ.

**ಶಾಲೆಯಿಂದ ಹೊರಗುಳಿದವರು ಉಡುಪಿ ಜಿಲ್ಲೆಯಲ್ಲಿ ಅತಿ ಕಡಿಮೆ:**

ರಾಜ್ಯದಲ್ಲೇ ಶಾಲೆಯಿಂದ ಹೊರಗುಳಿದ ಮಕ್ಕಳ ಸಂಖ್ಯೆ ಅತಿ ಕಡಿಮೆಯಿದ್ದು ಕಳೆದೊಂದು ದಶಕದಲ್ಲಿ ಶೇ. ೨.೩೦ರಿಂದ ಶೇ. ೦.೦೮ಕ್ಕಿಳಿದಿದೆ.

೨೦೧೨-೧೩ರಲ್ಲಿ ೭-೧೪ರ ಹರೆಯದ ೧೨೬ ಮಕ್ಕಳು ಶಾಲೆಯಿಂದ ಹೊರಗಿದ್ದಾರೆ. ೨೦೧೩-೧೪ರಲ್ಲಿ ಕಡ್ಡಾಯ ಶಿಕ್ಷಣ ಹಕ್ಕು (ಆರ್.ಟಿ.ಇ) ಕಾಯಿದೆಯಡಿ ಸನಿವಾಸ ಶಾಲೆಯಲ್ಲಿ ಉಚಿತ ಶಿಕ್ಷಣ ಕೊಡಲು ಉದ್ದೇಶಿಸಲಾಗಿದೆ. ೨೦೧೧-೧೨ರಲ್ಲಿ ಶಾಲೆಯಿಂದ ಹೊರಗುಳಿದ ೮೬ ಮಕ್ಕಳನ್ನು ಗುರುತಿಸಿ, ೪೧ ಮಕ್ಕಳನ್ನು ಶಾಲೆಗೆ ಸೇರಿಸಿದ್ದರೆ ಉಳಿದ ೪೫ ಮಕ್ಕಳ ಪತ್ತೆಯಾಗಿಲ್ಲ. ವಲಸೆ ಕಾರ್ಮಿಕರ ಮಕ್ಕಳು ಮೇ-ಜೂನ್ ವೇಳೆಗೆ ಬೇರೆ ಊರಿಗೆ ತೆರಳುತ್ತಾರೆ, ಇಲ್ಲವೇ ತಮ್ಮೂರಿಗೆ ಮರಳುತ್ತಾರೆ.

ಶಾಲೆಯಿಂದ ಹೊರಗುಳಿದ ಮಕ್ಕಳ ಗಣತಿ ಸಂದರ್ಭ ವಲಸೆ ಕಾರ್ಮಿಕರ ಮಕ್ಕಳನ್ನೂ ಗಣನೆಗೆ ತೆಗೆದುಕೊಳ್ಳಾಗುತ್ತಿದೆ. ಜೂನ್‌ಲ್ಲಿ ಶಾಲೆಗೆ ಸೇರಿಸಿ ವಯಸ್ಸಿಗನುಗುಣವಾಗಿ ತರಗತಿಗಳಿಗೆ ದಾಖಲಿಸಿ, ಕಲಿಕೆ ಅಂತರ ನಿವಾರಣೆಗೆ (ಲರ್ನಿಂಗ್ ಗ್ಯಾಪ್) ತರಬೇತಿ ನೀಡಲಾಗುವುದು.

೨೦೧೩-೧೪ರಲ್ಲಿ ಪತ್ತೆಯಾದ ೧೨೬ ಮಕ್ಕಳಲ್ಲಿ ೭೮ ಮಕ್ಕಳು ವಲಸೆ ಬಂದವರಾದರೆ, ೪೮ ಮಕ್ಕಳು ಉಡುಪಿ ಜಿಲ್ಲೆಯವರು. ವಲಸೆ ಕಾರ್ಮಿಕರ ಮಕ್ಕಳು ಹೆತ್ತವರ ಜತೆ ಕೂಲಿ ಕೆಲಸಕ್ಕೆ ತೆರಳುತ್ತಾರೆ. ಉಡುಪಿ

ಜಿಲ್ಲೆಯ ಬಡವರ ಮಕ್ಕಳು ಹೆತ್ತವರ ಜತೆ ಕೆಲಸದಲ್ಲಿ ಕೈ ಜೋಡಿಸುತ್ತಾರೆ. ಹೆತ್ತವರು ಒತ್ತಾಯಿಸಿದರೂ ಶಾಲೆಗೆ ಹೋಗೋದಿಲ್ಲ, ಕಲಿಕೆಯ ಬಗ್ಗೆ ಮಕ್ಕಳಲ್ಲಿ ನಿರಾಸಕ್ತಿಯೂ ಕೂಡ ಶಾಲೆಯಿಂದ ಹೊರಗುಳಿಯಲು ಕಾರಣ. ಹೀಗಾಗಿ ಶಿಕ್ಷಣ ಇಲಾಖಾಧಿಕಾರಿಗಳು ಹೆತ್ತವರ ಮನವೊಲಿಸಿ ಮಕ್ಕಳನ್ನು ಶಾಲೆಗೆ ಸೇರಿಸುವ ಯತ್ನ ಮಾಡುತ್ತಾರೆ.

ಸನಿವಾಸ ಶಾಲೆ: ಶಾಲೆಯಿಂದ ಹೊರಗುಳಿದ, ವಲಸೆ ಕಾರ್ಮಿಕರ ಮಕ್ಕಳಿಗೆ ಸರ್ವ ಶಿಕ್ಷಾ ಅಭಿಯಾನದಡಿ ಹನುಮಂತ ನಗರ ಹಾಗೂ ಉಡುಪಿಯ ನಾರ್ತ್ ಸ್ಕೂಲಿನಲ್ಲಿ (ಕಾರ್ಪ ಬ್ಯಾಂಕ್ ಬಳಿ) ಕನಿಷ್ಠ ೨೫ ಮಕ್ಕಳಿಗೆ ಸನಿವಾಸ ಶಾಲೆ ಆರಂಭಿಸಲು ಉದ್ದೇಶಿಸಲಾಗಿದೆ. ೨೦೧೪-೧೫ರಲ್ಲಿ ಶಾಲೆಯಿಂದ ಹೊರಗುಳಿದ ಮಕ್ಕಳ ಸಂಖ್ಯೆಯನ್ನು ಶೂನ್ಯಕ್ಕೆ ತರುವ ನಿಟ್ಟಿನಲ್ಲಿ ಯೋಜನೆ ರೂಪಿಸಲಾಗಿದೆ. ಸನಿವಾಸ ಶಾಲೆಗೆ ಸೇರುವ ಮಗುವೊಂದಕ್ಕೆ ತಿಂಗಳಿಗೆ ಒಂದು ಸಾವಿರ ರೂ. ವ್ಯಯಿಸಲು ಅವಕಾಶವಿದೆ.

**ಕೋಷ್ಟಕ ೨.೩.೧ ಉಡುಪಿ ಜಿಲ್ಲೆಯಲ್ಲಿ ಶಾಲೆಯಿಂದ ಹೊರಗುಳಿದವರ ಪ್ರಮಾಣ.**

| ವರ್ಷ | ಶಾಲೆಯಿಂದ ಹೊರಗೆ | ಸೇರ್ಪಡೆ |
|---|---|---|
| ೨೦೦೧-೦೨ | ೫೩೫ | ೩೪೦ |
| ೨೦೦೨-೦೩ | ೪೮೪ | ೨೭೧ |
| ೨೦೦೩-೦೪ | ೪೮೮ | ೧೫೧ |
| ೨೦೦೪-೦೫ | ೨೫೦ | ೬೪ |
| ೨೦೦೬-೦೭ | ೩೫೪ | ೧೧೯ |
| ೨೦೦೭-೦೮ | ೧೮೦ | ೫೦ |
| ೨೦೦೮-೦೯ | ೨೨೮ | ೧೮೦ |
| ೨೦೦೯-೧೦ | ೪೮೮ | ೩೪೦ |
| ೨೦೧೦-೧೧ | ೮೯ | ೩೯ |
| ೨೦೧೧-೧೨ | ೮೬ | ೪೫ |
| ೨೦೧೨-೧೩ | ೧೨೩ | ... |

ಮೂಲ: ದಿನಪತ್ರಿಕೆಯಲ್ಲಿ ಪ್ರಕಟಗೊಂಡ ಮಾಹಿತಿ.

## ಉಡುಪಿ ಜಿಲ್ಲೆ ಪ್ರಾಥಮಿಕ ಪೂರ್ವ ಶಿಕ್ಷಣ (೨೦೦೭)

ಅಂಗನವಾಡಿಗಳ ಸಂಖ್ಯೆ = ೧,೧೦೨

ಸೌಲಭ್ಯ ಪಡೆಯುತ್ತಿರುವ ೦-೬ ವರ್ಷದ ಮಕ್ಕಳ ಸಂಖ್ಯೆ = ೪೬,೯೫

ಜಿಲ್ಲೆಯಲ್ಲಿರುವ ಒಟ್ಟು ೦-೬ ವರ್ಷದ ಮಕ್ಕಳ ಸಂಖ್ಯೆ = ೧,೧೪,೫೮೧

ಅಂಗನವಾಡಿಯಿಂದ ಹೊರಗಿರುವ ಮಕ್ಕಳ ಸಂಖ್ಯೆ = ೬೭,೫೮೬

ಹೆಚ್ಚಿನ ಮಕ್ಕಳು ಖಾಸಗಿ ಪ್ರಾಥಮಿಕ ಪೂರ್ವ ಶಾಲೆಗಳಿಗೆ ಹೋಗುತ್ತಿರಬಹುದು. ಆದರೆ ಬಡ, ಹಿಂದುಳಿದ, ಕೊಳಗೇರಿಯ ಮಕ್ಕಳಿಗೆ ಅಂಗನವಾಡಿ ಸೇವೆ ದೊರೆಯುತ್ತಿಲ್ಲ.

## ಶಾಲಾ ಸೌಲಭ್ಯ (೨೦೧೦-೧೧)

ಉಡುಪಿ ಜಿಲ್ಲೆಯಲ್ಲಿರುವ ಶಿಕ್ಷಣ ಇಲಾಖೆಯ ೯೭೩ ಪ್ರಾಥಮಿಕ ಶಾಲೆಗಳಲ್ಲಿ ಮತ್ತು ೨೭೧ ಪ್ರೌಢಶಾಲೆಗಳಲ್ಲಿ ಲಭ್ಯವಿರುವ ಸೌಲಭ್ಯಗಳು ಈ ರೀತಿಯಾಗಿವೆ.

**ಕೋಷ್ಟಕ ೨.೩.೨ ಉಡುಪಿಯ ಪ್ರಾಥಮಿಕ ಶಾಲೆಗಳಲ್ಲಿ ಲಭ್ಯವಿರುವ ಸೌಲಭ್ಯ**

| ಸೌಲಭ್ಯಗಳು | ಪ್ರಾಥಮಿಕ ಶಾಲೆ | ಪ್ರೌಢಶಾಲೆ |
|---|---|---|
| ಕುಡಿಯುವ ನೀರು | ೫೪೨(೮೮%) | ೭೫(೬೬%) |
| ಶೌಚಾಲಯ | ೫೮೮(೯೫%) | ೮೧(೯೨%) |
| ಹೆಣ್ಣುಮಕ್ಕಳ ಶೌಚಾಲಯ | ೪೩೬(೭೭%) | ೭೬(೮೬%) |
| ವಿದ್ಯುಚ್ಛಕ್ತಿ | ೫೧೦(೮೩%) | ೮೧(೯೨%) |
| ಆಟದ ಮೈದಾನ | ೪೪೨(೭೨%) | ೭೨(೮೨%) |
| ಬುಕ್ ಬ್ಯಾಂಕ್ | ೪೬೨(೭೫%) | ೭೩(೮೩%) |
| ರ್ಯಾಂಪ್ | ೪೮(೮%) | ೧(೧%) |
| ಶಾಲೆಯಿಂದ ಹೊರಗಿರುವ ಮಕ್ಕಳು = ೨೦೧ | | |

## ರೋಗ ನಿರೋಧಕ (%)

**ಕೋಷ್ಟಕ ೨.೩.೩ ಉಡುಪಿ ಜಿಲ್ಲೆಯಲ್ಲಿ ರೋಗನಿರೋಧಕಗಳನ್ನು ಪಡೆದವರ ವಿವರ.**

| | |
|---|---|
| ಪೂರ್ಣ ರೋಗನಿರೋಧಕಗಳನ್ನು ಪಡೆದವರು | ೮೬.೮% |
| ಮೂರು ಭಾರಿ ಪೋಲೀಯೋ ಲಸಿಕೆ ಪಡೆದವರು | ೯೫.೨% |
| ಮೂರು ಭಾರಿ ಡಿ.ಟಿ.ಪಿ. ಪಡೆದವರು | ೮೬.೬% |
| ಧರ್ನುವಾಯು ಚುಚ್ಚುಮದ್ದು ಪಡೆದವರು | ೯೬.೦% |
| ಒಂದು ಭಾರಿ ವಿಟಮಿನ್ ಎ ಪಡೆದವರು | ೮೨.೨% |
| ಮೂರು ಭಾರಿ ವಿಟಮಿನ್ ಎ ಪಡೆದವರು | ೧೯.೬% |
| ಹುಟ್ಟಿದ ಒಂದು ಗಂಟೆಯೊಳಗೆ ತಾಯಿ ಹಾಲು ಕುಡಿದವರು | ೬೪.೮% |

**ಹೆರಿಗೆ ಮತ್ತು ಆರೋಗ್ಯ (%)**

**ಕೋಷ್ಟಕ ೨.೩.೪ ಉಡುಪಿ ಜಿಲ್ಲೆಯಲ್ಲಿನ ಹೆರಿಗೆ ಮತ್ತು ಆರೋಗ್ಯ ವಿವರ.**

| | |
|---|---|
| ೧೮ ವರ್ಷದೊಳಗೆ ಮದುವೆಯಾಗುತ್ತಿರುವ ಹೆಣ್ಣುಮಕ್ಕಳು | ೨.೭% |
| ಒಟ್ಟು ಹೆರಿಗೆಗಳಲ್ಲಿ ೧೫-೧೯ ವರ್ಷದವರಿಗಾದ ಹೆರಿಗೆಗಳು | ೩.೨% |
| ಮೂರು ಭಾರಿ ಪ್ರಸವಪೂರ್ವ ತಪಾಸಣೆ | ೯೬.೫% |
| ಸಾಂಸ್ಥಿಕ ಹೆರಿಗೆ | ೯೪.೩% |
| ಕಬ್ಬಿಣಾಂಶದ ಗುಳಿಗೆ ಪಡೆದವರು | ೯೬.೭% |

**ಹೆಚ್.ಐ.ವಿ. / ಏಡ್ಸ್**

❖ ೧೫-೪೯ ವರ್ಷದ ಮದುವೆಯಾದವರು ಹೆಚ್.ಐ.ವಿ. ತಪಾಸಣೆಗೆ ಒಳಗಾಗಿರುವುದು = ೩೩.೩%

೧೫-೧೯ ವರ್ಷದ ಮದುವೆಯಾದವರು ಹೆಚ್.ಐ.ವಿ. ಬಗ್ಗೆ ಕೇಳಿರುವುದು = ೧೦.೯%

**ಬಾಲಕಾರ್ಮಿಕ ವಿಶೇಷ ಶಾಲೆಗಳು ಮತ್ತು ಮಕ್ಕಳು**

❖ ರಾಜ್ಯ ಬಾಲಕಾರ್ಮಿಕ ಕ್ರಯಾ ಯೋಜನೆ: ಯಾವುದೇ ಶಾಲೆಗಳಿಲ್ಲ.

❖ ರಾಷ್ಟ್ರೀಯ ಬಾಲಕಾರ್ಮಿಕ ಕ್ರಿಯಾ ಯೀಜನೆ: ಯಾವುದೇ ಶಾಲೆಗಳಿಲ್ಲ.

❖ ಬಾಲಕಾರ್ಮಿಕರು (೨೦೦೧) = ೩೯.

❖ ನಿರಾಶ್ರಿತ ಮಕ್ಕಳ ತಾಣಗಳು = ೦.

*ಮೂಲಗಳು: ಜನಗಣತಿ ೨೦೧೧, ಸರ್ವಶಿಕ್ಷಣ ಅಭಿಯಾನ ೨೦೦೬-೦೭, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ೨೦೦೭, ಕಾರ್ಮಿಕ ಇಲಾಖೆ೨೦೦೧, ಡಿ.ಎಲ್.ಎಸ್.-ಆರ್.ಸಿ.ಎಚ್ ೨೦೦೭-೦೮.*

**ಮನೋಭಾವದ ಬದಲಾವಣೆಗಾಗಿ ಮಕ್ಕಳ ಹಕ್ಕುಗಳು...**

ಮಕ್ಕಳ ಹಕ್ಕುಗಳು ಸ್ವಾಭಾವಿಕ. ಇವುಗಳನ್ನು ಕೃತಕ ವಾತಾವರಣದಲ್ಲಿ ತೆಗೆದುಕೊಳ್ಳುವುದಾದರೆ ಅವುಗಳಿಗೆ ಅರ್ಥವಿಲ್ಲ ಎಂಬ ಅಭಿಪ್ರಾಯಗಳೂ ಇವೆ. ಆದರೆ, ಬದಲಾಗಿರುವ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ ಪರಿಸರಗಳಲ್ಲಿ ಮಕ್ಕಳ ಮನಸ್ಸು ದೇಹಗಳ ಮೇಲೆ ಸಮಾಜದ ವಯಸ್ಕ ಸಮುದಾಯ ಮಾಡುವ ಧಾಳಿಯಿಂದಾಗಿ ಮಕ್ಕಳ ಹಕ್ಕುಗಳ ಬಗ್ಗೆ ದನಿಯೆತ್ತುವ, ಆ ಮೂಲಕ ಬಹು ಜನರ ಗಮನವನ್ನು ಇದರತ್ತ ಸೆಳೆಯುವ ಅವಶ್ಯಕತೆ ಹಿಂದೆಂದಿಗಿಂತಲೂ ಈಗ ಹೆಚ್ಚಾಗಿದೆ.

ಸ್ವಾಭಾವಿಕ ಹಕ್ಕುಗಳು ಸದಾಕಾಲ ಎಲ್ಲಾ ಕಡೆಯೂ ಇರುವುದೆ ಆಗಿದೆ. ಇವುಗಳನ್ನು ಲಿಖಿತ ರೂಪದಲ್ಲಿ ಕಾನೂನಿನ ಪರಿಭಾಷೆಯಲ್ಲಿ ಬರೆಯುವುದರ ಅವಶ್ಯಕತೆಯಿದೆಯೇ? ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನಲ್ಲೂ ಮಕ್ಕಳಿಗೆ ತೊಂದರೆ, ಹಿಂಸೆ, ಕಷ್ಟ ಕೊಡಬಾರದೆಂಬ ನಿಲುವು ಇದ್ದೆ ಇರುತ್ತದೆ. ನಮ್ಮ ಮನೆಯ, ಹತ್ತಿರದವರ, ತಿಳಿದವರ ಮಕ್ಕಳನ್ನು ಮಾರಿ ಬಿಡುವ, ದುಡಿಸಿಕೊಳ್ಳುವ, ಅಪಹರಿಸುವ, ಅತ್ಯಾಚಾರ ಮಾಡಿ, ಯಾರಿಗೊ ಮಾರಿ

ಿಡುವ, ದುಷ್ಟ ಆಲೋಚನೆಗಳು ಸಾಮಾನ್ಯವಾಗಿ ಬರುವುದಿಲ್ಲ. ಆದರೆ, ಈ ಮಕ್ಕಳು ಎಲ್ಲಿಯೋ, ಯಾರದೋ ಆಗಿದ್ದರೆ ಈ ಆಲೋಚನೆಗೆ ತಡೆ ಒಡ್ಡುವ ಭಾವನೆಗಳು ಬಾರದಿರ ಬಹುದು. ಸ್ವಾರ್ಥಪರ ಜನರಲ್ಲಿ ಇವು ಗಟ್ಟಿಯಾಗಿ ಇವುಗಳೇ ಸಾಮಾಜಿಕ ನಿಲುವುಗಳಾಗಿ ಬೆಳೆಯುವ ಅಪಾಯವಿದೆ. ಇಂತಹ ಬೆಳವಣಿಗೆಗಳಿಗೆ ತಡೆಯೊಡ್ಡಿ ಮಕ್ಕಳ ಪರ ಮನೋಭಾವನೆ ಬೆಳೆಯಲೆತ್ನಿಸುವುದೇ ಮಕ್ಕಳ ಹಕ್ಕುಗಳ ಒಡಂಬಡಿಕೆ.

ಈ ನಿಟ್ಟಿನಲ್ಲಿ ಜಾರಿಗೆ ಬಂದಿರುವುದು ಮಕ್ಕಳ ಹಕ್ಕುಗಳು, ಮಾನವ ಹಕ್ಕುಗಳು, ಮಹಿಳಾ ಹಕ್ಕುಗಳು, ಪರಿಸರ, ಭೂಮಿ, ಬುಡಕಟ್ಟು ಜನಾಂಗ, ಯುದ್ಧ ಮುಂತಾದವುಗಳನ್ನು ಕುರಿತು ಇರುವ ಒಡಂಬಡಿಕೆಗಳು, ಒಪ್ಪಂದಗಳು, ಘೋಷಣೆಗಳು ಇತ್ಯಾದಿ. ಈ ಎಲ್ಲವುಗಳ 'ಮನೋಭಾವದ ಬದಲಾವಣೆ'. ವ್ಯಕ್ತಿಗತವಾಗಿ, ಸಾಂಘಿಕ, ಸಮುದಾಯ, ಸರಕಾರಗಳ ಮಟ್ಟಗಳಲ್ಲಿ ಗುಣಾತ್ಮಕವಾದ ಮನೋಭಾವ ಬದಲಾವಣೆ.

ಈ ಬದಲಾವಣೆಗಳ ಕಾರ್ಯರೂಪ ವಿವಿಧ ಮಟ್ಟದಲ್ಲಿ ವಿವಿಧ ರೀತಿಯಲ್ಲಾಗುತ್ತಿವೆ. ಕಾನೂನು, ನೀತಿ, ನಿಯಮಗಳು, ವ್ಯವಸ್ಥೆಗಳಲ್ಲಿ ಸೂಕ್ತ ಮಾರ್ಪಾಡು ಮತ್ತು ಹೊಸ ವಿಧಿವಿಧಾನಗಳ ರಚನೆ, ಕೆಲವು ನಿರ್ದಿಷ್ಟ ಕೆಲಸ, ಕಾರ್ಯಕ್ರಮ, ಯೋಜನೆಗಳಿಗೆ ಹಣಕಾಸು ಮೀಸಲು, ಆಗುತ್ತಿರುವ ಅಥವಾ ನಡೆದಿರುವ ಕೆಲಸಗಳ ವಿಧಿಬದ್ಧವಾದ ಉಸ್ತುವಾರಿ ಮತ್ತು ವಿಮರ್ಶೆ, ಪ್ರಚಾರ, ಸಹಕಾರ, ಸಹಾಯಕ್ಕಾಗಿ ಬೇಡಿಕೆ ಸಲ್ಲಿಸುವುದು ಇತ್ಯಾದಿಗಳು.

**ಜಾಗತಿಕ ಮಟ್ಟದಲ್ಲಿ ಮನೋಭಾವದ ಬದಲಾವಣೆ:**

೧೯೯೦ ರಲ್ಲಿ ವಿಶ್ವ ನಾಯಕರು ಸೇರಿ, ೨೦೦೦ರ ಒಳಗೆ ಮಕ್ಕಿಗೆ ಅತ್ಯುತ್ತಮವಾದುದನ್ನು ನೀಡುವ ಭರವಸೆ ನೀಡಿದ್ದರು. ಅವುಗಳಲ್ಲಿ ಕೆಲವು ಶಿಶುಮರಣ ಹಾಗೂ ಮಕ್ಕಳ ಮರಣ ಪ್ರಮಾಣ ತಗ್ಗಿಸುವುದು, ಶಾಲಾ ಶಿಕ್ಷಣಕ್ಕೆ ಎಲ್ಲರನ್ನೂ ಒಳಗೂಡಿಸುವುದು, ಪೋಲಿಯೋ ಪೀಡೆ ಅಳಿಸಿ ಹಾಕುವುದು, ಪೌಷ್ಟಿಕ ಆಹಾರ ಒದಗಿಸುವುದು, ಯುದ್ಧಗಳಲ್ಲಿ ಮಕ್ಕಳನ್ನು ಒಳಗೊಳ್ಳದಿರುವುದು, ಬಾಲಕಾರ್ಮಿಕ ಪದ್ಧತಿ ಕೊನೆಗಾಣಿಸುವುದು, ಇತ್ಯಾದಿ. ಇವುಗಳಲ್ಲಿ ಎಷ್ಟು ವಿಚರಗಳ ಬಗ್ಗೆ ಸರಕಾರಗಳು ಗಂಭೀರವಾಗಿ ಕ್ರಮ ಕೈಗೊಂಡವು, ಉತ್ತಮ ಫಲಿತಾಂಶ ಪಡೆದವು ಎಂದು ವಿಶ್ಲೇಷಿಸಿದಾಗ ದೊರೆತ ಮಾಹಿತಿ ಅಷ್ಟೇನೂ ಉತ್ತೇಜನಕಾರಿಯಾಗಿಲ್ಲ. ಇವುಗಳನ್ನು ವಿಶ್ಲೇಷಿಸಿ ಮುಂದೆ ಯಾವ ಕ್ರಮ ಕೈಗೊಳ್ಳಬೇಕೆಂದು ಆಲೋಚಿಸಲು ೨೦೦೨ ಮೇ ತಿಂಗಳಿನಲ್ಲಿ ವಿಶ್ವ ನಾಯಕರು ಮತ್ತೆ ಸಭೆ ಸೇರಿದ್ದರು. ಈ ಸಭೆಯಲ್ಲಿ ಈ ಬಾರಿ ಸ್ವಯಂಸೇವಾ ಸಂಘಗಳ ಪ್ರತಿನಿಧಿಗಳಲ್ಲದೆ ಸಾಕಷ್ಟು ಸಂಖ್ಯೆಯಲ್ಲಿ ಮಕ್ಕಳೂ ಸೇರಿ ಮಕ್ಕಳ ಸದ್ಯದ ಸ್ಥಿತಿಗಳ ವಿಶ್ಲೇಷಣೆ, ಮರು ಯೋಜನೆ ತಯಾರಿ, ಬೇಡಿಕೆ ಸಲ್ಲಿಕೆ ಇವುಗಳಲ್ಲೆಲ್ಲಾ ತೊಡಗಿದ್ದುದು ವಿಶೇಷ. ಇದೇ ಸಂದರ್ಭದಲ್ಲಿ ಸಹಸ್ರಮಾನದ ಅಭಿವೃದ್ಧಿ ಗುರಿಗಳು ಎಂಬ ದಖಲೆ ಬಿಡುಗಡೆ ಮಾಡಿದ್ದಾರೆ.

ಮಕ್ಕಳ ಹಕ್ಕುಗಳ ಒಡಂಬಡಿಕೆ ಯಾವುದೇ ಒಂದು ಹಂತದ, ಒಂದು ಸಮಯದ ಕೆಲಸ ನಿರ್ವಹಣೆಗೆ ಮಾತ್ರ ಸೀಮಿತ ಎಂಬುದಲ್ಲ. ಇದು ಸರ್ವಕಾಲಕ್ಕೂ, ಸರ್ವರಿಗೂ ಎಲ್ಲೆಡೆಯೂ ಚಾಲ್ತಿಯಲ್ಲಿರುವ ವಿಚಾರ. ಹೀಗಾಗಿ ಎಲ್ಲಾ ಸರಕಾರಗಳು ತಮ್ಮ ತಮ್ಮ ದೇಶಗಳ ಗಡಿಗಳನ್ನು ಮರೆತು ಮಕ್ಕಳ ಶ್ರೇಯೋಭಿವೃದ್ಧಿಗಾಗಿ, ತಮ್ಮ

ಸ್ವಾರ್ಥಗಳನ್ನು ಬಿಟ್ಟು ಪ್ರತಿಯೊಬ್ಬರನ್ನೂ ಒಳಗೂಡಿ ಮಕ್ಕಳ ಹಕ್ಕುಗಳನ್ನು ಜಾರಿ ಮಾಡಬೇಕಿದೆ. ಇದರಲ್ಲಿ ನಾವು ನೀವೂ ಎಲ್ಲರೂ ನಮ್ಮ ನಮ್ಮ ಪಾತ್ರಗಳೇನು ಎಂದು ಯೋಚಿಸಿ ಕಾರ್ಯೋನ್ಮುಖರಾಗಬೇಕಿದೆ.

**ಮಕ್ಕಳ ಹಕ್ಕುಗಳನ್ನು ಕುರಿತು ಪ್ರಚಾರ ಮತ್ತು ಒಡಂಬಡಿಕೆ ಜಾರಿ ಕುರಿತು ವಿಶ್ವಸಂಸ್ಥೆಗೆ ವರದಿಗಳು, ಯೋಜನೆಗಳು:**

ಮಕ್ಕಳ ಹಕ್ಕುಗಳ ಒಡಂಬಡಿಕೆಯಲ್ಲಿ ಅಂತರ್ಗತವಾಗಿರುವ ಒಂದು ಅತ್ಯಂತ ಪ್ರಮುಖ ವಿಚಾರ ಒಡಂಬಡಿಕೆಯನ್ನು ಒಪ್ಪಿದ ರಾಷ್ಟ್ರಗಳಲ್ಲಿ ಒಡಂಬಡಿಕೆಯ ಯಾವ ಯಾವ ವಿಚಾರಗಳನ್ನು ಎಷ್ಟರ ಮಟ್ಟಿಗೆ ಸಾಕರಗೊಳಿಸಲಾಗುತ್ತಿದೆ, ಅದರ ಪರಿಣಾಮವೇನು ಎಂಬಿವೇ ವಿಚಾರಗಳ ಬಗ್ಗೆ ವಿಶ್ವಸಂಸ್ಥೆಯ ಸಮಿತಿಯು ವಿಚಾರಣೆ ನಡೆಸುವುದು. ಒಡಂಬಡಿಕೆಯ ಪರಿಚ್ಛೇದ ೪೩ರಂತೆ ಒಡಂಬಡಿಕೆಗೆ ಒಪ್ಪಿ ಸಹಿ ಹಾಕಿದ ಮೊದಲ ಎರಡು ವರ್ಷಗಳ ನಂತರ ಮೊದಲ ವರದಿಯನ್ನೂ, ನಂತರ ಪ್ರತಿ ಐದು ವರ್ಷಗಳಿಗೊಮ್ಮೆ ವಿಶ್ವಸಂಸ್ಥೆಗೆ ಕಳಿಸಬೇಕು.

ಭಾರತವು ೧೯೯೨ರಲ್ಲಿ ಒಡಂಬಡಿಕೆಗೆ ಸಹಿ ಹಾಕಿದರೂ ತನ್ನ ಮೊದಲ ವರದಿಯನ್ನು ವಿಶ್ವಸಂಸ್ಥೆಯ ಸಮಿತಿಗೆ ಕಳುಹಿಸಿದ್ದು ೧೯೯೭ರಲ್ಲೇ.

ಮಕ್ಕಳ ಹಕ್ಕುಗಳನ್ನು ಒಪ್ಪಿದ ಪ್ರತಿ ರಾಷ್ಟ್ರವೂ ತನ್ನ ದೇಶದಲ್ಲಿ ಮಕ್ಕಳ ಹಕ್ಕುಗಳನ್ನು ಕುರಿತು ವ್ಯಾಪಕ ಪ್ರಚಾರ ಮಾಡಲು ಒಪ್ಪಿಕೊಂಡಿರುತ್ತವೆ. ಅದನ್ನು ಒಡಂಬಡಿಕೆಯ ಪರಿಚ್ಛೇದ ೪೨ರಲ್ಲಿ ಕಾಣಬಹುದು. 'ಮಕ್ಕಳ ಹಕ್ಕುಗಳ ಒಡಂಬಡಿಕೆಯಲ್ಲಿನ ವಿಧಿಗಳು, ವಿಚಾರಗಳನ್ನೂ ಸೂಕ್ತವಾದ ವಿಧಾನಗಳ ಮಾಧ್ಯಮಗಳ ಮೂಲಕ ದೇಶದ ಎಲ್ಲ ಮಕ್ಕಳು ಮತ್ತು ವಯಸ್ಕರಿಗೆ ತಲುಪಿಸಲು ಸರ್ಕಾರಗಳು ಕಟಿಬದ್ಧವಾಗಿದೆ'. ಇದಕ್ಕಾಗಿ ವಿವಿಧ ಮಾಧ್ಯಮಗಳು, ಕಾರ್ಯಕ್ರಮಗಳ ಮೂಲಕ ವಿವಿಧ ಪರಿಸ್ಥಿತಿ, ಹಿನ್ನೆಲೆ, ಪ್ರದೇಶಗಳಲ್ಲಿರುವ ಮಕ್ಕಳ ವಿವಿಧ ವಿಚಾರಗಳನ್ನು ಕುರಿತು ವಯಸ್ಕ ಸಮಾಜದಲ್ಲಿ ವ್ಯಾಪಕ ಪ್ರಚಾರ ಮಾಡಿ ಎಲ್ಲರಲ್ಲೂ ಮಕ್ಕಳನ್ನು ಕುರಿತು ಸಂವೇದನೆ / ಸೂಕ್ಷ್ಮತೆ ಬೆಳೆಸಬೇಕಿತ್ತು. ಇದನ್ನು ಸರ್ಕಾರ ಕೆಲವೊಂದು ಕಡೆ ನಡೆಸಿದೆ. ಹಲವಾರು ಸ್ವಯಂ ಸೇವಾ ಸಂಘಟನೆಗಳೂ ಸಹ ಈ ದಿಶೆಯಲ್ಲಿ ಸಾಕಷ್ಟು ಕೆಲಸಗಳನ್ನು ಮಾಡಿವೆ.

ಮಕ್ಕಳ ಹಕ್ಕುಗಳನ್ನು ಒಪ್ಪಿದ ರಾಷ್ಟ್ರಗಳು ಕೇವಲ ಪ್ರಚಾರ ಮಾಡಿದರೆ ಸಾಲದು, ಮಕ್ಕಳ ಹಕ್ಕುಗಳನ್ನು ಜಾರಿ ಮಾಡಲು ಎಂತಹ ಪ್ರಯತ್ನಗಳನ್ನು ಮಾಡಿದ್ದಾರೆ ಹಾಗೂ ಮಕ್ಕಳ ಪರಿಸ್ಥಿಯಲ್ಲಿ ಎಂತಹ ಗುಣಾತ್ಮಕ ಬದಲಾವಣೆಗಳು ಆಗಿವೆ ಅಥವಾ ಆಗಿಲ್ಲ ಎಂದು ವಿಶ್ವ ಸಂಸ್ಥೆಗೆ ಕಾಲಕಾಲಕ್ಕೆ ವರದಿಗಳನ್ನು ನೀಡಬೇಕು. ಈ ಕುರಿತು ಪರಿಚ್ಛೇದ ೪೩ರಂತೆ ರಾಷ್ಟ್ರಗಳು ಒಪ್ಪಿಕೊಂಡಿರುತ್ತವೆ.

**ಸಮಿತಿ ಮತ್ತು ವರದಿ:**

ಭಾರತ ಸರ್ಕಾರ ವಿಶ್ವಸಂಸ್ಥೆಯ ಮಕ್ಕಳ ಹಕ್ಕುಗಳ ಸಮಿತಿಗೆ ತನ್ನ ಮೊದಲ / ಪ್ರಾರಂಭಿಕ ವರದಿಯನ್ನು ೧೯ ಮಾರ್ಚ್ ೧೯೯೭ರಂದು ಸಲ್ಲಿಸಿತ್ತು. ಈ ವರದಿಯ ವಿಶ್ಲೇಷಣೆಯನ್ನು ಸಮಿತಿ ೨೮ ಜನವರಿ ೨೦೦೦ದಂದು ನಡೆಸಿ ತನ್ನ ಅಭಿಪ್ರಾಯಗಳನ್ನು ಸೂಚಿಸಿತ್ತು. ಹೀಗೆ ಅಭಿಪ್ರಾಯಗಳನ್ನು ನೀಡುವ ಮೊದಲು

ಾರತದಿಂದ ಸ್ವೀಕರಿಸಿದ್ದ ವಿವಿದ ಪರ್ಯಾಯ ವರದಿಗಳನ್ನೂ ಸಹ ವಿಶ್ವಸಂಸ್ಥೆಯ ಈ ಸಮಿತಿ ಅವಲೋಕಿಸಿತ್ತು.

ಹೀಗೆ ವಿಮರ್ಷೆ ಮಾಡುವ ಅಧಿಕಾರವನ್ನು ಮಕ್ಕಳ ಹಕ್ಕುಗಳ ಒಡಂಬಡಿಕೆಯ ಪರಿಚ್ಛೇದ ೪೪ ಕೊಟ್ಟು ಕೆಲವು ನಿರ್ದೇಶನಗಳನ್ನೂ ರಾಷ್ಟ್ರಗಳಿಗೆ ನೀಡುತ್ತದೆ.

ಭಾರತ ಸರ್ಕಾರ ವಿಶ್ವಸಂಸ್ಥೆಗೆ ೨೦೦೮ರಲ್ಲಿ ತನ್ನ ಎರಡನೇ ವರದಿ ನೀಡುವ ಪ್ರಕ್ರಿಯೆಗಳನ್ನು ನಡೆಸಿದೆ. ಇದಕ್ಕಾಗಿ ಪ್ರತಿ ರಾಜ್ಯ ಸರ್ಕಾರವೂ ಸಹ ತನ್ನ ವರದಿಗಳನ್ನು ನೀಡಬೇಕಿದೆ. ಇದೇ ಮೊದಲ ಬಾರಿಗೆ ರಾಜ್ಯ ಸರ್ಕಾರವು ಮಕ್ಕಳೊಂದಿಗೆ ಸಮಾಲೋಚನೆಯನ್ನು ಈ ಉದ್ದೇಶಕ್ಕಾಗಿಯೇ ನಡೆಸಿತು. ಮಕ್ಕಳೊಡನೆ ಸಮಾಲೋಚನೆಗಳನ್ನು ನಡೆಸಿರುವ ಅನುಭವ ಇರುವ ಚೈಲ್ಡ್ ರೈಟ್ಸ್ ಟ್ರಸ್ಟ್ ಈ ಪ್ರಕ್ರಿಯೆ ನಡೆಸಲು ಸಹಕಾರ ನೀಡಿತ್ತು.

**ಭಾರತದ ಮಕ್ಕಳ ಪರವಾಗಿ ೧೯೯೭ರಲ್ಲಿ ವಿಶ್ವಸಂಸ್ಥೆಗೆ ಎಂಟು ಪರ್ಯಾಯ ವರದಿಗಳನ್ನು ಮಂಡಿಸಲಾಗಿತ್ತು. ಅವುಗಳು ಈ ಮುಂದಿನಂತಿವೆ:**

ಸಿ.ಎ.ಸಿ.ಎಲ್; ಬಟರ್ ಫ್ಲೈಸ್; ದುಡಿಯುವ ಮಕ್ಕಳ ವರದಿ; ಯುವ, ಹೆಚ್.ಆರ್.ಎಫ್ ಮತ್ತು ಲಯ; ಇಂಟರ್ ನ್ಯಾಷನಲ್ ಹ್ಯೂಮನ್ ರೈಟ್ಸ್ ಅಸೋಸಿಯೇಷನ್ ಆಫ್ ಆಮೆರಿಕನ್ ಮೈನಾರಿಟೀಸ್ (ಜಮ್ಮು ಮತ್ತು ಕಾಶ್ಮೀರ ಮಕ್ಕಳ ಬಗ್ಗೆ); ಹ್ಯೂಮನ್ ರೈಟ್ಸ್ ವಾಚ್, ಅಂಬೇಡ್ಕರ್ ಸೆಂಟರ್ ಫಾರ್ ಜಸ್ಟೀಸ್ ಅಂಡ್ ಪೀಸ್ ಮತ್ತು ಕೋರ್–ಪೂರ್ವ ಭಾರತದ ಮಕ್ಕಳ ಸ್ಥಿತಿಗತಿ.

೨೦೦೨–೦೩ರಲ್ಲಿ ವಿಶ್ವಸಂಸ್ಥೆಗೆ ಭಾರತ ಸರ್ಕಾರ ತನ್ನ ವರದಿ ಸಲ್ಲಿಸಿದ ಮೇಲೆ ಮಕ್ಕಳ ಪರವಾಗಿ ಆರು ಪರ್ಯಾಯ ವರದಿಗಳಾನ್ನು ಸಲ್ಲಿಸಲಾಯಿತು.

೧. ಐ.ಎ.ಸಿ.ಆರ್.(ಮಕ್ಕಳ ಹಕ್ಕುಗಳಿಗಾಗಿ ಭಾರತೀಯ ಸಂಘಟನೆ) ೨. ರಾಷ್ಟ್ರೀಯ ದುಡಿಯುವ ಮಕ್ಕಳ ಚಳವಳಿ. ೩. ಕೋರ್–ಪೂರ್ವ ಭಾರತದ ಮಕ್ಕಳು. ೪. ಏಷಿಯನ್ ಸೆಂಟರ್ ಫಾರ್ ಹ್ಯೂಮನ್ ರೈಟ್ಸ್. ೫. ಬ್ರೆಸ್ಟ್ ಫೀಡಿಂಗ್ ಪ್ರಮೋಷನ್ ನೆಟ್‌ವರ್ಕ್ ಆಫ್ ಇಂಡಿಯಾ ೬. ಬಟರ್ ಫ್ಲೈ. (ಅರ್ಚನಾ ಮೆಹಂದಾಲೆ ಅವರು ಬುಡಕಟ್ಟು ಜನಾಂಗದ ಮಕ್ಕಳ ಶಿಕ್ಷಣ ಕುರಿತು ತಮ್ಮ ವಯಕ್ತಿಕ ಅಭಿಪ್ರಾಯಗಳನ್ನು ಸಮಿತಿಯ ಆಹ್ವಾನದ ಮೇರೆಗೆ ನೀಡಿದ್ದರು).

## ಮಕ್ಕಳಿಗಾಗಿ ರಾಷ್ಟ್ರೀಯ ಮತ್ತು ರಾಜ್ಯ ಕ್ರಿಯಾ ಯೋಜನೆಗಳು:

೧೯೯೦ರ ಜಾಗತಿಕ ನಾಯಕರ ಶೃಂಗಸಭೆಯ ನಂತರ ಮಕ್ಕಳ ಹಕ್ಕುಗಳ ಒಡಂಬಡಿಕೆಗೆ ೧೯೯೨ರಲ್ಲಿ ಭಾರತ ಸಹಿ ಮಾಡಿತು. ಹಾಗೆ ಸಹಿ ಮಾಡುವ ಸಂದರ್ಭದಲ್ಲಿ ಭಾರತದಲ್ಲಿರುವ ಬಾಲಕಾರ್ಮಿಕರ ಪರಿಸ್ಥಿತಿ ಕುರಿತು ಭಾರತ ಸರ್ಕಾರ ತನ್ನ ಹೇಳಿಕೆಯನ್ನು ನೀಡಿತ್ತು. ಮಕ್ಕಳ ಹಕ್ಕುಗಳ ಒಡಂಬಡಿಕೆಯ ಪರಿಚ್ಛೇದ ೩೨ರಂತೆ ಈ ಒಡಂಬಡಿಕೆಯನ್ನು ಒಪ್ಪುವ ಎಲ್ಲ ರಾಷ್ಟ್ರಗಳು ಬಾಲಕಾರ್ಮಿಕ ಪದ್ಧತಿಯನ್ನು ತಕ್ಷಣವೇ ಕೊನೆಗಾಣಿಸಲು ಬದ್ಧವಾಗಿರಬೇಕಿತ್ತು. ಭಾರತ ಈ ಕುರಿತು ತನ್ನ ತಕರಾರು ಹೇಳಿತ್ತು.

ಭಾರತದಲ್ಲಿನ ಆಗಿನ ಸ್ಥಿತಿಯಲ್ಲಿ ಬಾಲಕಾರ್ಮಿಕ ಪದ್ಧತಿಯನ್ನು ತಕ್ಷಣ ತೊಡೆಯುವುದಕ್ಕೆ ಆಗುವುದಿಲ್ಲವೆಂದೂ ಅದಕ್ಕೆ ಕಾಲಾವಕಾಶ ಬೇಕೆಂದೂ ಹೇಳಲಾಗಿತ್ತು. ಇದನ್ನು ವಿಶ್ವಸಂಸ್ಥೆ ಒಂದು ಶರತ್ತೆಂದೇ ಪರಿಗಣಿಸಿ ಭಾರತಕ್ಕೆ ಮಕ್ಕಳ ಹಕ್ಕುಗಳ ಒಡಂಬಡಿಕೆಗೆ ಸಹಿ ಹಾಕಲು ಅನುಮತಿ ನೀಡಿತ್ತು. ಅಂದರೆ ಮುಂದಿನ ೧೦ ವರ್ಷಗಳಲ್ಲಿ ಭಾರತದ ಎಲ್ಲ ಮಕ್ಕಳನ್ನು ಶಿಕ್ಷಣಕ್ಕೆ ಒಳಪಡಿಸಲಾಗುತ್ತದೀಂಬ ನಿಬಂಧನೆ. ಈ ತಕರಾರನ್ನು ತಕ್ಷಣದಲ್ಲೇ ಹಿಂದಕ್ಕೆ ತೆಗೆದುಕೊಳ್ಳಬೇಕೆಂದು ವಿಶ್ವಸಂಸ್ಥೆಯ ಸಮಿತಿಯು ಭರತಕ್ಕೆ ೨೦೦೪ರ ತನ್ನ ವರದಿಯಲ್ಲಿ ನಿರ್ದೇಶನ ನೀಡಿದೆ.

ಆರೋಗ್ಯ, ರಕ್ಷಣೆ, ಶಿಕ್ಷಣ, ಅಭಿವೃದ್ಧಿಯೇ ಮೊದಲ್ಲದ ವಿಚಾರಗಳನ್ನು ಜಾರಿ ಮಾಡಲು ಭಾರತ ೧೯೯೪ರಲ್ಲಿ ರಾಷ್ಟ್ರೀಯ ಮಕ್ಕಳ ಕ್ರಿಯಾ ಯೋಜನೆಯನ್ನು ರಚಿಸಿತ್ತು. ರಾಜ್ಯ ಸರ್ಕಾರಗಳೂ ಇದೇ ರೀತಿಯ ಕ್ರಿಯಾ ಯೋಜನೆಗಳನ್ನು ರಚಿಸಿ, ಹತ್ತು ವರ್ಷಗಳಲ್ಲಿ ಮಕ್ಕಳ ಎಲ್ಲ ಕ್ಷೇತ್ರಗಳಲ್ಲಿ ಗುರುಗಳನ್ನು ನಿಗಧಿಪಡಿಸಿ ಸಾಧಿಸಲು ಉದ್ದೇಶಿಸಲಾಗಿತ್ತು. ಆದರೆ ಮುಂದಿನ ದಿನಗಳಲ್ಲಿ ಕ್ರಿಯಾ ಯೋಜನೆ ಕುರಿತು ಯಾವುದೇ ಪರಿಶೀಲನೆ, ಮೌಲ್ಯಮಾಪನವಾಗಲಿಲ್ಲ.

೨೦೦೨ರಲ್ಲಿ ನಡೆದ ಎರಡನೇ ಜಾಗತಿಕ ಶೃಂಗಸಭೆಯ ನಂತರ ೨೦೦೨ರಲ್ಲಿ ಸರ್ಕಾರಗಳು ಮತ್ತೊಮ್ಮೆ ಮಕ್ಕಳ ಕ್ರಿಯಾಯೋಜನೆತಯಾರಿಸುವ ತರಾತುರಿಯಲ್ಲಿ ತೊಡಗಿಸಿಕೊಂಡವು. ಇಂತಹ ಕ್ರಿಯಾ ಯೋಜನೆ ರಾಜ್ಯ, ಜಿಲ್ಲೆ, ತಾಲೂಕು, ಅಲ್ಲಿಂದ ಮುಂದೆ ಪಂಚಾಯತಿ ಮಟ್ಟದಲ್ಲಿ ಆಗುವ ಪ್ರಯತ್ನಗಳು ನಡೆದಿತ್ತು. ಈ ಪ್ರಕ್ರಿಯೆಯಲ್ಲಿ ಕರ್ನಾಟಕ ರಾಜ್ಯದಲ್ಲಿ ಮಕ್ಕಳನ್ನೂ ತೊಡಗಿಸಿಕೊಂಡಿದ್ದು ವಿಶೇಷ. ಜಿಲ್ಲೆಗಳು ಮತ್ತು ಪಂಚಾಯತಿಗಳ ಮಟ್ಟದ ಜನಪ್ರತಿನಿಧಿಗಳು ಹಾಗೂ ಅಧಿಕಾರಿಗಳಿಗೆ ಮಕ್ಕಳ ಹಕ್ಕುಗಳು ಮತ್ತು ಕ್ರಿಯಾ ಯೋಜನೆಯ ಅರಿವು ಮೂಡಿಸುವ ಕೆಲಸಗಳನ್ನು ಕೆಲವು ಸರ್ಕಾರಗಳು ನಡೆಸಿದವು.

ಇದರೊಂದಿಗೆ ಮಕ್ಕಳ ಆರೋಗ್ಯ ಕುರಿತು, ಬಾಲಕಾರ್ಮಿಕ ಪದ್ದತಿ ಕೊನೆಗಾಣಿಸಲು ಹಾಗೂ ಮಕ್ಕಳ ಸಾಗಣೆ ಮಾರಾಟ ತಡೆಗಟ್ಟಲೂ ಸಹ ಕೆಲವು ರಾಜ್ಯಗಳು ಕ್ರಿಯಾ ಯೋಜನೆಗಳನ್ನು ರಚಿಸಿವೆ. ಕರ್ನಾಟಕ ಸರ್ಕಾರ ೨೦೦೮ರಲ್ಲಿ ಹೊರಡಿಸಿರುವ ಘೋಷಣೆಯಂತೆ ಮಕ್ಕಳ ಅಕಾಡೆಮಿಯನ್ನು ಸ್ಥಾಪಿಸಲು ಉದ್ದೇಶಿಸಲಾಗಿದೆ. ಇದರ ರೂಪುರೇಷೆಗಳು, ಕಾರ್ಯೋದ್ದೇಶಗಳು ಇನ್ನೂ ತಿಳಿದುಬಂದಿಲ್ಲ.

**ಮಕ್ಕಳಿಗಾಗಿ ಜಾಗತಿಕ ಚಳುವಳಿ:**

ಈ ಜಗತ್ತಿನಲ್ಲಿ ಹುಟ್ಟುವ ಪ್ರತಿ ಮಗುವಿನೊಡನೆ ಮನುಕುಲದ ಭರವಸೆಗಳು, ಕನಸುಗಳು ಮತ್ತೆ ಮರುಹುಟ್ಟು ಪಡೆಯುತ್ತಿವೆ.

ಈ ಹಿಂದೆ ಎಂದೂ ನಮ್ಮ ವಶದಲ್ಲಿ ಇರದಂತಹ ನಮ್ಮೆಲ್ಲರ ಒಗ್ಗೂಡಿದ ಭವಿಷ್ಯದ ಹರಿಕಾರರು ಈ ಮಕ್ಕಳು. ಮಕ್ಕಳು ಉಳಿದು, ಬೆಳೆದು, ಕಲಿತು ಸಂಪೂರ್ಣವಾಗಿ ವಿಕಾಸ ಹೊಂದಲು ಚಿಂತನೆ, ಸಂಪನ್ಮೂಲಗಳು, ಅರ್ಥಬದ್ಧವಾದ ಕಾನೂನಿನ ಚೌಕಟ್ಟು, ಕುಟುಂಬದ ವಾತಾವರಣದಲ್ಲಿ ಪ್ರೀತಿ, ವಿಶ್ವಾಸ, ಭದ್ರತೆಯ ಅನುಭವ

ಮಕ್ಕಳಿಗಿರಬೇಕು ಎಂಬಂತಹ ಉದಾತ್ತ ವಿಚಾರಗಳಿಗೆ ನಿಜವಾಗಿಯೂ ಬೆಲೆ ನೀಡಬೇಕೆಂಬ ಮನೋಭಾವ ಜನರಲ್ಲಿ ಬೆಳೆಯುತ್ತಿದೆ.

ಈ ಎಲ್ಲವನ್ನೂ ಜಗತ್ತಿನ ರಾಷ್ಟ್ರಗಳ ನಾಯಕರು ಮಕ್ಕಳ ಹಕ್ಕುಗಳ ಒಡಂಬಡಿಕೆಯ ಹಿನ್ನೆಲೆಯಲ್ಲಿ ೧೯೯೦ರಲ್ಲಿ ನಡೆದ 'ಮಕ್ಕಳಿಗಾಗಿ ಜಾಗತಿಕ ಶೃಂಗಸಭೆ'ಯಲ್ಲಿ ಒಪ್ಪಿದ್ದಾರೆ. ಈ ಒಪ್ಪಂದದ ಜಾರಿ ಆಗಲೇಬೇಕು - ಕೇವಲ ಸರ್ಕಾರಗಳಿಂದ ಮಾತ್ರವಲ್ಲ, ನಾವೆಲ್ಲರೂ ಇದಕ್ಕೆ ಜವಾಬುದಾರರು.

ಮುಂದಿನ ಶತಮಾನದ ಮಕ್ಕಳ ಭವಿಷ್ಯದತ್ತ ಗಮನಿಸಿದಾಗ, ಮಕ್ಕಳ ಹಕ್ಕುಗಳ ರಕ್ಷಣೆ, ಎಲ್ಲ ಮಕ್ಕಳ ಮೂಲ ಆವಶ್ಯಕತೆಗಳ ಪೂರೈಕೆಗಾಗಿ ಇನ್ನೂ ಮಾಡಬೇಕಾದ ಕೆಲಸದ ಅಗಾಧತೆಯ ಅರಿವಾಗುತ್ತದೆ.

ಈ ಹಿನ್ನೆಲೆಯಲ್ಲಿ ಜಗತ್ತಿನ ಎಲ್ಲ ಮಕ್ಕಳ ಹಿತದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಜಗತ್ತಿನ ಎಲ್ಲ ದೇಶಗಳ, ಎಲ್ಲ ಸಮುದಾಯಗಳ, ಎಲ್ಲ ತರಹದ ಸಂಘ ಸಂಸ್ಥೆಗಳ, ಎಲ್ಲ ಕುಟುಂಬಗಳ ಸದಸ್ಯರೆಲ್ಲರೂ ಸೇರಿ, ಎಳೆವಯಸ್ಸು, ಮನಸ್ಸು, ದೇಹಗಳನ್ನು ಹಿಂಡಿ ಕೊಲ್ಲುವ ಬಡತನ, ಅನಾರೋಗ್ಯ, ಹಿಂಸೆ, ಅನಕ್ಷರತೆ, ತಾರತಮ್ಯಗಳನ್ನು ಬಡಿದೋಡಿಸಲು 'ಮಕ್ಕಳಿಗಾಗಿ ಜಾಗತಿಕ ಚಳುವಳಿ' ಆರಂಭವಾಯಿತು.

ಮಕ್ಕಳ ಹಿತ ಕಾಪಾಡುವ ದೃಷ್ಟಿಯಂತಹ ಉದಾತ್ತ ಚಿಂತನೆಗಳು ನಮ್ಮ ಜೀವನ, ಮನಸ್ಸು, ಹೃದಯಗಳಲ್ಲಿ ನೆಲೆಯೂರಲು ನಾವು ಮಕ್ಕಳ ಅಭಿಪ್ರಾಯಗಳನ್ನು ಆಲಿಸಬೇಕಾದುದು ಬಹಳ ಮುಖ್ಯ. ಮಕ್ಕಳ ಬದುಕಿಗೆ ಮನುಕುಲದ ಸದಸ್ಯರಾದ ನಮ್ಮೆಲ್ಲರ ಜವಾಬ್ದಾರಿ ಬಹು ಹಿರಿದಾದುದು.

ಈ ಹಿನ್ನೆಲೆಯಲ್ಲಿ ೨೦೦೨ರಲ್ಲಿ ಮೇ ೮ – ೧೦ರವರೆಗೆ ವಿಶ್ವಸಂಸ್ಥೆಯು ಮಕ್ಕಳನ್ನು ಕುರಿತು ವಿಶೇಷ ಅಧಿವೇಶನವನ್ನು ನ್ಯೂಯಾರ್ಕ್ ನಗರದಲ್ಲಿ ನಡೆಸಿತು. (೨೦೦೧ರ ಸೆಪ್ಟೆಂಬರ್ ೧೧ರಂದು ನ್ಯೂಯಾರ್ಕ್ ನಗರದ ಮೇಲೆ ನಡೆದ ಭಯೋತ್ಪಾದಕರ ದಾಳಿಯಿಂದಾಗಿ ಸೆಪ್ಟೆಂಬರ್ ೧೯ – ೨೧ರವರೆಗೆ ನಡೆಯಬೇಕಿದ್ದ ಈ ಅಧಿವೇಶನ ಮುಂದೂಡಲ್ಪಟ್ಟಿತು.). ವಿಶ್ವದ ಎಲ್ಲ ರಾಷ್ಟ್ರಗಳ ನಾಯಕರು ಭಾಗವಹಿಸಿದ ಈ ಸಭೆಯಲ್ಲಿ ವಿಶ್ವದ ಎಲ್ಲ ಮಕ್ಕಳ ಹಿತ ಕಾಪಾಡಿರಿ ಎಂಬ ಜಾಗತಿಕ ಮಟ್ಟದ ಒತ್ತಾಯ ಹೇರಲು ಒಂದು ಅವಕಾಶ ಒದಗಿತ್ತು. ೯ಳ ಲಕ್ಷಕ್ಕೂ ಹೆಚ್ಚು ಜನ ಈ ಚಳವಳಿಗೆ ತಮ್ಮ ಬೆಂಬಲ ಸೂಚಿಸಿದರು.

೧. **ಯಾವುದೇ ಮಗುವನ್ನು ಬಿಟ್ಟು ಬಿಡಬೇಡಿ:** ಎಲ್ಲ ಹುಡುಗಿಯರು, ಹುಡುಗರು ಸ್ವಾತಂತ್ರ್ಯ, ಸಮಾನ ಗೌರವ ಮತ್ತು ಹಕ್ಕುಗಳೊಂದಿಗೆ ಹುಟ್ಟಿದ್ದಾರೆ. ಯಾವುದೇ ಮಗುವಿನ ವಿರುದ್ಧ ನಡೆಯುವ ಯಾವುದೇ ತಾರತಮ್ಯ ಮತ್ತು ಭೇದ ಭಾವ ಕೊನೆಗಾಣಬೇಕು.

೨. **ಮಕ್ಕಳ ವಿಚಾರ ಮೊದಲಿರಲಿ:** ಮಕ್ಕಳ ಏಳ್ಗೆಗಾಗಿ ತೊಟ್ಟಿರುವ ಕರ್ತವ್ಯಗಳನ್ನು ಸರ್ಕಾರಗಳು ತಪ್ಪದೇ ಪೂರೈಸಬೇಕು. ಇಷ್ಟೇ ಅಲ್ಲ, ಎಲ್ಲರೂ – ಸ್ವಯಂ ಸೇವಾ ಸಂಘಟನೆಗಳು, ಧಾರ್ಮಿಕ ಸಂಸ್ಥೆ ಸಮೂಹಗಳು, ಉದ್ದಿಮೆಗಳು, ಮಕ್ಕಳು, ಯುವಕರು, ನೀವೂ – ಎಲ್ಲರೂ ಮಕ್ಕಳ ಹಕ್ಕುಗಳನ್ನು ಗೌರವಿಸುವ ಮತ್ತು ಜಾರಿ ಮಾಡುವತ್ತ ಪಣ ತೊಡಬೇಕು.

೩. **ಪ್ರತಿ ಮಗುವಿನ ಬಗ್ಗೆ ಕಾಳಜಿ ಇರಲಿ:** ಮಕ್ಕಳ ಉಳಿವು ಅಭಿವೃದ್ಧಿ ಮಾನವ ಜನಾಂಗದ ಅಭಿವೃದ್ಧಿಯ ಮೂಲಾಧಾರ. ಮಕ್ಕಳಿಗೆ ಜೀವನದಲ್ಲಿ ಉತ್ತಮವಾದ ಆರಂಭವನ್ನು ಒದಗಿಸುವುದಕ್ಕೆ ಯಾವುದೇ ಪ್ರಯತ್ನಗಳನ್ನು, ಕರ್ತವ್ಯಗಳನ್ನು ಕೈ ಬಿಡಬಾರದು.

೪. **ಹೆಚ್.ಐ.ವಿ / ಏಡ್ಸ್ ವಿರುದ್ಧ ಹೋರಾಡಿ:** ಹೆಚ್.ಐ.ವಿ / ಏಡ್ಸ್‌ಗೆ ಬಲಿಯಾಗದಂತೆ ಮಕ್ಕಳು, ಯುವಕರು ಮತ್ತು ಅವರ ಕುಟುಂಬವನ್ನು ರಕ್ಷಿಸಿರಿ.

೫. **ಮಕ್ಕಳ ಶೋಷಣೆ ನಿಲ್ಲಿಸಿ:** ಮಕ್ಕಳ ಮೇಲಾಗುತ್ತಿರುವ ಹಿಂಸೆ, ದುರುಪಯೋಗವನ್ನು ತಕ್ಷಣ ನಿಲ್ಲಿಸಬೇಕು. ಮಕ್ಕಳ ಆರ್ಥಿಕ ದುರುಪಯೋಗ (ಬಾಲಕಾರ್ಮಿಕ ಪದ್ಧತಿ) ಮತ್ತು ಲೈಂಗಿಕ ಶೋಷಣೆಯನ್ನು ನಿಲ್ಲಿಸಲೇಬೇಕು.

೬. **ಮಕ್ಕಳ ಮಾತನ್ನು ಆಲಿಸಿ:** ತಮ್ಮನ್ನು ಕುರಿತ, ತಮ್ಮ ಮೇಲೆ ಪರಿಣಾಮ ಬೀರುವ ಯಾವುದೇ ವಿಚಾರದ ಬಗ್ಗೆ ಭಾಗವಹಿಸುವುದಕ್ಕೆ, ತಮ್ಮ ಅಭಿಪ್ರಾಯ ವ್ಯಕ್ತಪಡಿಸುವುದಕ್ಕೆ ಮಕ್ಕಳು ಮತ್ತು ಯುವಜನರಿಗೆ ಇರುವ ಹಕ್ಕನ್ನು ಎಲ್ಲರೂ ಗೌರವಿಸಬೇಕು. ಅವರ ಮಾತುಗಳನ್ನು, ಅಭಿಪ್ರಾಯಗಳನ್ನು ಆಲಿಸುವುದಷ್ಟೆ ಅಲ್ಲ, ಆಬಗ್ಗೆ ಕ್ರಮವನ್ನು ಕೈಗೊಳ್ಳಬೇಕು.

೭. **ಎಲ್ಲ ಮಕ್ಕಳಿಗೂ ಶಿಕ್ಷಣ ದೊರಕಲಿ:** ಎಲ್ಲ ಹುಡುಗಿಯರಿಗೂ, ಹುಡುಗರಿಗೂ ಕಡ್ಡಾಯ, ಉಚಿತ ಮತ್ತು ಉತ್ತಮ ಗುಣಮಟ್ಟದ ಶಿಕ್ಷಣ ಒಂದು ಮೂಲಭೂತ ಹಕ್ಕಾಗಿ ದೊರೆಯಲೇಬೇಕು.

೮. **ಯುದ್ಧಗಳಿಂದ ಮಕ್ಕಳನ್ನು ರಕ್ಷಿಸಿ:** ಯಾವುದೇ ಮಗು ಸಶಸ್ತ್ರ ಸಂಘರ್ಷಗಳ ಭಯಾನಕ ಪರಿಸ್ಥಿಗೆ ಈಡಾಗದಂತೆ ಎಲ್ಲ ಮಕ್ಕಳಗಳನ್ನು ರಕ್ಷಿಸಲೇಬೇಕು.

೯. **ಈ ಭೂಮಿಯನ್ನು ಮಕ್ಕಳಿಗಾಗಿ ರಕ್ಷಿಸಿ:** ಈ ಭೂಮಿಯ ಪರಿಸರವನ್ನು ಸ್ಥಳೀಯ, ರಾಷ್ಟ್ರೀಯ ಮತ್ತು ಜಾಗತಿಕ ಮಟ್ಟದಲ್ಲಿ ಉಳಿಸಿ, ರಕ್ಷಿಸಿ, ಮುಂದಿನ ಜನಾಂಗಕ್ಕೆ ನೀಡಲು ಎಲ್ಲರೂ – ಸರ್ಕಾರ, ಸಮಾಜ ಮತ್ತು ಖಾಸಗೀ ವಲಯಗಳು ತಕ್ಷಣ ಕ್ರಮ ಕೈಗೊಳ್ಳಬೇಕು.

೧೦. **ಬಡತನದ ವಿರುದ್ಧ ಹೋರಾಡಿ:** ಮಕ್ಕಳ ಅಭಿವೃದ್ಧಿಯಲ್ಲಿ ಸಂಪನ್ಮೂಲಗಳನ್ನು ಹೂಡಿ: ಬಡತನದ ಬೇಗೆ ಹೆಚ್ಚಾಗಿ ಕಾಡುವುದು ಮಕ್ಕಳನ್ನೇ. ಹೀಗಾಗಿ ಬಡತನದ ವಿರುದ್ಧ ನಡೆಯುವ ಹೋರಾಟ ಮಕ್ಕಳ ವಿಚಾರಗಳಿಂದಲೇ ಆರಂಭವಾಗಬೇಕು. ಬಡವರಿಗೆ, ಬಡಕುಟುಂಬಗಳಿಗೆ ನೇರವಾದ ಸೇವಾ ಸೌಲಭ್ಯಗಳು ತಲುಪುವ ಪ್ರಾಥಮಿಕ ಶಿಕ್ಷಣ ಮತ್ತು ಮೂಲ ಆರೋಗ್ಯ ಸೇವೆಗಳಲ್ಲಿ ಸರ್ಕಾರಗಳು ಹೆಚ್ಚಿನ ಸಂಪನ್ಮೂಲಗಳನ್ನು ಹೂಡುವುದು ಇದರಲ್ಲಿ ಪ್ರಮುಖವಾದುದು. ಇದರ ಜೊತೆಜೊತೆಗೆ ಋಣ ಪರಿಹಾರ ಕಾರ್ಯಕ್ರಮಗಳು, ಅಭಿವೃದ್ಧಿ ಸಹಕಾರ ಮತ್ತು ಸರ್ಕಾರಿ ವೆಚ್ಚಗಳಲ್ಲಿ ಮಕ್ಕಳ ಶ್ರೇಯೋಭಿವೃದ್ಧಿಗೆ ಪ್ರಮುಖ ಸ್ಥಾನವನ್ನು ನೀಡಲೇಬೇಕು.

ಈ ಮೇಲಿನ ಹತ್ತು ವಿಚಾರಗಳಲ್ಲಿ ಯಾವ ಮೂರು ವಿಚಾರಗಳಿಗೆ ಭಾರತದಲ್ಲಿ ಅತ್ಯಂತ ತುರ್ತಾಗಿ ಗಮನ ನೀಡಬೇಕೆಂಬುದರ ಬಗ್ಗೆ ಚಿಂತನೆ ನಡೆಸಬೇಕಾಗುತ್ತದೆ.

**ಕ್ಕಳ ಕುರಿತು ವಿಶ್ವಸಂಸ್ಥೆಯ ವಿಶೇಷಾಧಿವೇಶನ:**

೨೦೦೨ರ ಮೇ ೮ರಿಂದ ೧೦ರ ತನಕ ನ್ಯೂಯಾರ್ಕ್ ನಗರದಲ್ಲಿ ನಡೆದ ವಿಶೇಷ ಅಧಿವೇಶನಕ್ಕೆ ಹತ್ತು ರ್ಷಗಳ ಹಿನ್ನೆಲೆಯಿದೆ. ೧೯೯೦ರಲ್ಲಿ ಮಕ್ಕಳನ್ನು ಕುರಿತು ನಡೆದ ವಿಶ್ವಸಂಸ್ಥೆಯ ವಿಶೇಷ ಅಧಿವೇಶನದ ುಸರಣೆ ಈ ಅಧಿವೇಶನ. ಜಗತ್ತಿನ ಎಲ್ಲ ಮಕ್ಕಳ ಬದುಕನ್ನು ಹಸನುಗೊಳಿಸಬೇಕೆಂದು ನಡೆದ ಪ್ರಯತ್ನಗಳಿಗೆ ೇ ಸ್ಫೂರ್ತಿ ಎನ್ನಬಹುದು. ಎಲ್ಲ ಮಕ್ಕಳಿಗೆ ಅತ್ಯುತ್ತಮವಾದ ಜೀವನ ಮತ್ತು ಭರವಸೆಯ ಭವಿಷ್ಯವನ್ನು ಡುತ್ತೇವೆ ಎಂದು ಎಲ್ಲ ರಾಷ್ಟ್ರಗಳ ನಾಯಕರು ೧೯೯೦ರಲ್ಲಿ ಪಣ ತೊಟ್ಟಿದ್ದರು.

ಮಕ್ಕಳ ಉಳಿವು, ರಕ್ಷಣೆ, ಬೆಳವಣಿಗೆ ಒಂದು ಜಾಗತಿಕ ಕ್ರಿಯಾಯೋಜನೆ ಹಾಗೂ ಅದರ ಜಾರಿಗೆ ಒಪ್ಪಿ ಅಧಿವೇಶನದಲ್ಲಿ ಭಾಗವಹಿಸಿದ್ದ ಎಲ್ಲ ರಾಷ್ಟ್ರ ನಾಯಕರು ಸಹಿ ಹಾಕಿದ್ದರು. ಭಾರತವೂ ಇವುಗಳಲ್ಲೊಂದು ುಖ ದೇಶ. ಮುಂದಿನ ಹತ್ತು ವರ್ಷಗಳಲ್ಲಿ ಮಕ್ಕಳ ಬದುಕು ಉತ್ತಮಪಡಿಸಲು ಬಡತನ, ಅನಾರೋಗ್ಯ, ೌಷ್ಟಿಕತೆ, ಅನಕ್ಷರತೆ ವಿರುದ್ಧ ಕ್ರಮ ಕೈಗೊಳ್ಳಲು ರಾಷ್ಟ್ರ ನಾಯಕರು ಗುರಿಗಳನ್ನು ಆಯಾ ರಾಷ್ಟ್ರಗಳಿಗೆ ಬಂಧಪಟ್ಟಂತೆ ೧೯೯೦ರಲ್ಲಿ ಮುಂದಿಟ್ಟಿದ್ದರು.

೨೦೦೨ರ ಮೇ ತಿಂಗಳಲ್ಲಿ ನಡೆದ ವಿಶ್ವಸಂಸ್ಥೆಯ ವಿಶೇಷಾಧಿವೇಶನದಲ್ಲಿ ಈ ಮುಂದಿನ ವಿಚಾರಗಳು ುಖ ಸ್ಥಾನವನ್ನು ಪಡೆದಿದ್ದವು.

ಮಕ್ಕಳ ಹಕ್ಕುಗಳನ್ನು ರಕ್ಷಿಸಲು ಕಳೆದ ಹತ್ತು ವರ್ಷಗಳಲ್ಲಿ ರಾಷ್ಟ್ರಗಳು ಏನು ಮಾಡಿವೆ ಎಂದು ವಿಶ್ಲೇಷಿಸುವುದು.

ಶಿಕ್ಷಣ ಮತ್ತು ಕೌಶಲ್ಯಗಳು ಎಲ್ಲ ಮಕ್ಕಳಿಗೂ ದೊರಕುವಂತಾಗಿ, ಎಲ್ಲ ಮಕ್ಕಳು ತಮಗೆ ಸಂಬಂಧಪಟ್ಟ ವಿಚಾರಗಳಲ್ಲಿ ಭಾಗವಹಿಸಲು ಅನುಕೂಲವಾಗುವಂತಹ ಯೋಜನೆಗಳನ್ನು ಮುಂದಿಡುವುದು.

ಮಕ್ಕಳ ಬದುಕು ಮಟ್ಟಪ್ಪು ಹಸನಾಗಲು ಇನ್ನೂ ಏನೇನು ಮಾಡಬೇಕೆಂದು ಯೋಜಿಸುವುದು.

ವಿಶ್ವಸಂಸ್ಥೆಯ ವರದಿ ಉಲ್ಲೇಖಿಸುವಂತೆ ೧೯೯೦ – ೨೦೦೦ರ ನಡುವಿನ ಹತ್ತು ವರ್ಷಗಳಲ್ಲಿ ಇಡೀ ಗತ್ತಿನ ಹೆಚ್ಚು ಹೆಚ್ಚು ಮಕ್ಕಳು ಶಾಲೆಗೆ ದಾಖಲಾಗಿದ್ದಾರೆ. ರೋಗ ನಿರೋಧಕ ಚುಚ್ಚುಮದ್ದು, ಲಸಿಕೆಗಳಿಂದ ೋಟ್ಯಂತರ ಮಕ್ಕಳು ಕುರುಡಾಗುವುದು ಮತ್ತು ಮಾನಸಿಕವಾಗಿ ಅಸ್ವಸ್ಥರಾಗುವುದರಿಂದ ರಕ್ಷಿಸಲಾಗಿದೆ.

ುಂದಿನ ವರ್ಷಗಳಲ್ಲಿ ಏನು ಗುರಿ?

ಮಕ್ಕಳ ಹಿತ ಹಕ್ಕು ಕಾಪಾಡುವುದರಲ್ಲಿ ಬಹಳಷ್ಟು ಸಾಧಿಸಲಾಗಿದ್ದರೂ, ತೀವ್ರವಾಗಿ ಗಮನ ೀಡಲೇಬೇಕಾಗಿರುವ ಅಂಶಗಳು ಇನ್ನೂ ಅನೇಕ ಇವೆ. ಜಗತ್ತಿನ ಕೋಟ್ಯಂತರ ಮಕ್ಕಳು ಈಗಲೂ ಪ್ರತಿನಿತ್ಯ ಹಲವಾರು ಕಷ್ಟನಷ್ಟಗಳನ್ನು ಅನುಭವಿಸುತ್ತಲೇ ಇದ್ದಾರೆ. ಬಡತನ, ಸಶಸ್ತ್ರ ಸಂಘರ್ಷಗಳು, ಏಡ್ಸ್‌ನಂತಹ ಭೀಕರ ರೋಗಗಳು, ತಾರತಮ್ಯಗಳಿಂದ ಈಗಲೂ ಬಳಲುತ್ತಿರುವರು.

ಐದು ವರ್ಷದೊಳಗಿನ ೧೬ ಕೋಟಿ ಮಕ್ಕಳು ಅಪೌಷ್ಟಿಕತೆಯಿಂದ ಬಳಲುತ್ತಿದ್ದಾರೆ. ಪ್ರತಿ ವರ್ಷ ಇದೊಂದೇ ಕಾರಣದಿಂದಾಗಿ ಸುಮಾರು ಒಂದು ಕೋಟಿ ಮಕ್ಕಳು ಸಾವನ್ನಪ್ಪುತ್ತಿದ್ದಾರೆ.

ಒಂದು ಕೋಟಿ ಮಕ್ಕಳು ಪ್ರಾಥಮಿಕ ಶಾಲೆಗೆ ಹೋಗುವುದೇ ಇಲ್ಲ. ಇದರಲ್ಲಿ ಮೂರನೇ ಎರಡು ಭಾಗ ಹೆಣ್ಣುಮಕ್ಕಳು.

ದಿನಕ್ಕೆ ರೂ. ೫೦ ($೧)ಕ್ಕಿಂತಲೂ ಕಡಿಮೆ ಸಂಪಾದಿಸುವ ಕುಟುಂಬಗಳಲ್ಲಿ ೬೦ಕೋಟಿ ಮಕ್ಕಳು ಬದುಕೆಳೆಯುತ್ತಿದ್ದಾರೆ.

೧೪ ಕೋಟಿ ಜನರಿಗೆ ಶುದ್ಧವಾದ ಕುಡಿಯುವ ನೀರಿನ ಸೌಲಭ್ಯವಿಲ್ಲ.

ಏಡ್ಸ್‌ನಿಂದಾಗಿ ೧.೩೦ಕೋಟಿ ಮಕ್ಕಳು ಅನಾಥರಾಗಿದ್ದಾರೆ. ಪ್ರತಿ ದಿನ ೮೫೦೦ಮಕ್ಕಳು ಏಡ್ಸ್‌ಗೆ ಕಾರಣವಾಗುವ ಹೆಚ್.ಐ.ವಿ. ವೈರಾಣುವಿನ ಸೋಂಕಿಗೊಳಗಾಗುವ ಭಯಾನಕ ಸ್ಥಿತಿ ಇದೆ.

ನ್ಯೂಯಾರ್ಕ್ ನಗರದಲ್ಲಿರುವ ವಿಶ್ವಸಂಸ್ಥೆಯ ಪ್ರಧಾನ ಕಛೇರಿಯಲ್ಲಿ ನಡೆದ ಈ ವಿಶೇಷಾಧಿವೇಶನದಲ್ಲಿ ವಿಶ್ವಸಂಸ್ಥೆಯ ೧೯೦ ಸದಸ್ಯ ರಾಷ್ಟ್ರಗಳಲ್ಲಿ ೧೮೭ ಪ್ರತಿನಿಧಿಗಳು, ವಿಶ್ವಸಂಸ್ಥೆಯ ವಿವಿಧ ಅಂಗಸಂಸ್ಥೆಗಳು, ೧೧೭ ದೇಶಗಳ ೬೯ ಸ್ವಯಂಸೇವಾ ಸಂಸ್ಥೆಗಳು, ೧೭೩೨ ಪ್ರತಿನಿಧಿಗಳು ಹಾಗೂ ೧೪೮ ದೇಶಗಳ ೪೦೬ ಮಕ್ಕಳು ಭಾಗವಹಿಸಿದ್ದರು. ಮುಖ್ಯ ಅಧಿವೇಶನಕ್ಕೆ ಮೊದಲು ಮೇ ೫ರಿಂದ ೭ರವರೆಗೆ ಸಭೆ ಸೇರಿದ್ದ ಮಕ್ಕಳು 'ನಮಗೆ ಯುಕ್ತವಾದ ಜಗತ್ತು' ಎಂಬ ಸಂದೇಶವನ್ನು ಸಿದ್ಧಪಡಿಸಿದರು. ಈ ಸಂದೇಶವನ್ನು ಮೇ ೯ರ ವಿಶ್ವಸಂಸ್ಥೆಯ ಸಾಮಾನ್ಯ ಸಭೆಯಲ್ಲಿ ಓದಲಾಯಿತು.

ಮುಖ್ಯ ಸಭೆಯ ಆರಂಭಿಕ ಹಂತದಲ್ಲಿ ಮಾತನಾಡಿದ ವಿಶ್ವಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಕೋಫಿ ಅನ್ನಾನ್ ಮಕ್ಕಳ ಪ್ರಾಥನವಾದ ಹಕ್ಕುಗಳನ್ನು ಎತ್ತಿಹಿಡಿಯಲು, ಮಕ್ಕಳ ಬದುಕು ಉತ್ತಮಪಡಿಸುವ ಪ್ರಯತ್ನದಲ್ಲಿ ವಯಸ್ಕರು ಸೋತಿದ್ದೇವೆ ಎಂದರು. ಬಡತನ, ಹಸಿವು ಇಲ್ಲದ ವಾತಾವರಣದಲ್ಲಿ, ಉತ್ತಮ ಗುಣಮಟ್ಟದ ಶಿಕ್ಷಣ ಪಡೆಯುವ, ಅಂಟುರೋಗಗಳಿಂದ ರಕ್ಷಣೆ ಹೊಂದುವ, ಹೆಚ್.ಐ.ವಿ. / ಏಡ್ಸ್ ಭಯವಿಲ್ಲದ, ಯುದ್ಧ, ದುರುಪಯೋಗ, ಶೋಷಣೆಗೆ ಗುರಿಯಾಗದಂತಹ ಆರೋಗ್ಯಪೂರ್ಣ ಭೂಮಿಯ ನಿರ್ಮಾಣವಾಗಬೇಕಿರುವುದು ಇಂದಿನ ಅವಶ್ಯಕತೆ. ಇದರತ್ತ ಜಾಗತಿಕ ನಾಯಕರು ತುರ್ತಾಗಿ ಗಮನಹರಿಸಿಕ್ರಮಕೈಗೊಳ್ಳಬೇಕು ಎಂದೂ ಅವರು ಹೇಳಿದ್ದರು.

ಈ ಜಾಗತಿಕ ಸಭೆಗೆ ಮೊದಲು ಸುಮಾರು ಒಂದೂವರೆ ವರ್ಷಗಳ ಕಾಲ ನಡೆದ ಜಾಗತಿಕ ಮಟ್ಟದ ಮಕ್ಕಳಿಗಾಗಿ ಜಾಗತಿಕ ಮಟ್ಟದ ಚಳುವಳಿ' ಜನಾಭಿಪ್ರಾಯ ಸಂಗ್ರಹಿಸಿದ ಹತ್ತು ವಿಚಾರಗಳು, ಜಾಗತಿಕ ನಾಯಕರು ಮುಂದಿಟ್ಟ ಕ್ರಿಯಾ ಯೋಜನೆಯಲ್ಲಿ ಪ್ರಮುಖ ಪಾತ್ರವಹಿಸಿತ್ತು, ಈ ವಿಶೇಷಾಧಿವೇಶನದ ನಂತರ ಘೋಷಿತವಾಗಿರುವ ಕ್ರಿಯಾ ಯೋಜನೆಯಲ್ಲಿ ಆರೋಗ್ಯ ಶಿಕ್ಷಣ, ಮಕ್ಕಳ ರಕ್ಷಣೆ ಮತ್ತು ಹೆಚ್. ಐ.ವಿ./ಏಡ್ಸ್

ವಿರುದ್ಧ ಮಕ್ಕಳ ರಕ್ಷಣೆ ಹಾಗೂ ಈ ಎಲ್ಲವೂಗಳಿಗಾಗಿ ಸಂಪನ್ಮೂಲ ಕ್ರೋಢಿಕರಣ ಮತ್ತು ಉಸ್ತುವಾರಿ ಎದ್ದು ಕಾಣುತ್ತದೆ.

ಜಾಗತಿಕ ಮಟ್ಟದ ಈ ಸಮ್ಮೇಳನ ಮುಗಿದು ಹೋಯಿತೆಂದು ನಾವೇನೂ ಕೈಕಟ್ಟಿ ಕುಳಿತುಕೊಳ್ಳಬೇಕಿಲ್ಲ. ಮುಂದಿನ ದಶಕಗಳಲ್ಲಿ ಮಕ್ಕಳ ಬದುಕು ಎಂತಹ ಬದಲಾವಣೆ ಕಾಣುತ್ತದೆ ಎಂದು ನೋಡಲು ನಾವು ಸದಾ ಜಾಗೃತರಾಗಿರಬೇಕು. ನಿಮ್ಮ ನಿಮ್ಮ ಸಮುದಾಯದಲ್ಲಿ ಮಕ್ಕಳ ಉತ್ತಮ ಬದುಕಿಗೆ ಏನೇನನ್ನು ಯಾವ ಯಾವ ಆದ್ಯತೆಗಳಲ್ಲಿ ಆಗಬೇಕು ಎಂದು ನಿಮ್ಮ ಸ್ಥಳೀಯ/ಹಳ್ಳಿ/ತಾಲ್ಲೂಕು/ಜಿಲ್ಲೆ/ರಾಜ್ಯ/ರಾಷ್ಟ್ರ ನಾಯಕರುಗಳಿಗೆ ಮನನ ಮಾಡಿಸುತ್ತಲೇ ಇರಬೇಕು.

**ಮಕ್ಕಳ ಕ್ರಿಯಾ ಯೋಜನೆ:**

ಮಕ್ಕಳ ಹಕ್ಕುಗಳ ಒಡಂಬಡಿಕೆಗೆ ಸಹಿ ಮಾಡಿದ ಭಾರತ, ಜಾಗತಿಕ ನಾಯಕರ ಶೃಂಗಸಭೆಯ ನಂತರ ೧೯೯೪ರಲ್ಲಿ ರಾಷ್ಟ್ರೀಯ ಮಕ್ಕಳ ಕ್ರಿಯಾ ಯೋಜನೆಯನ್ನು ರಚಿಸಿತ್ತು. ರಾಜ್ಯ ಸರ್ಕಾರಗಳೂ ಇದೇ ರೀತಿಯ ಕ್ರಿಯಾ ಯೋಜನೆಗಳನ್ನು ರಚಿಸಿ, ಹತ್ತು ವರ್ಷಗಳಲ್ಲಿ ಮಕ್ಕಳ ಎಲ್ಲ ಕ್ಷೇತ್ರಗಳಲ್ಲಿ ಗುರಿಗಳನ್ನು ನಿಗದಿಪಡಿಸಲು, ಸಾಧಿಸಲು ಉದ್ದೇಶಿಸಲಾಗಿತ್ತು. ಆದರೆ ಕ್ರಿಯಾ ಯೋಜನೆ ಕುರಿತು ಯಾವುದೇ ಪರಿಶೀಲನೆ, ಮೌಲ್ಯಮಾಪನವಾಗಲಿಲ್ಲ.

೨೦೦೨ರಲ್ಲಿ ನಡೆದ ಎರಡನೇ ಜಾಗತಿಕ ಶೃಂಗಸಭೆಯ ನಂತರ ಸರ್ಕಾರಗಳು ಮತ್ತೊಮ್ಮೆ ಮಕ್ಕಳ ಕ್ರಿಯಾ ಯೊಜನೆ ತಯಾರಿಸುವ ತರಾತುರಿಯಲ್ಲಿ ತೊಡಗಿಕೊಂಡವು. ಕರ್ನಾಟಕ ಸರ್ಕಾರ ೨೦೦೩ರಲ್ಲಿ ರಾಜ್ಯ ಕ್ರಿಯಾ ಯೋಜನೆಯನ್ನು (೨೦೦೩-೨೦೧೦) ಹೊರಡಿಸಿತು (ಈ ಲೇಖಕ ಯುನಿಸೆಫ್ ಪರವಾಗಿ ಸರ್ಕಾರಕ್ಕೆ ಈ ಪ್ರಕ್ರಿಯೆಯಲ್ಲಿ ಸಲಹಾಕಾರರಾಗಿದ್ದರು). ಭಾರತ ಸರ್ಕಾರ ೨೦೦೫ರಲ್ಲಿ ರಾಷ್ಟ್ರೀಯ ಮಕ್ಕಳ ಕ್ರಿಯಾ ಯೋಜನೆ ಪ್ರಕಟಿಸಿತು. ೨೦೦೮ರ ಆರಂಭದಲ್ಲೂ ಈ ಕ್ರಿಯಾ ಯೋಜನೆ ವಿಮರ್ಶೆ ಆಗಿಲ್ಲ. ಇಂತಹ ಕ್ರಿಯಾ ಯೋಜನೆ ರಾಜ್ಯ, ಜಿಲ್ಲೆ, ತಾಲೂಕು, ಅಲ್ಲಿಂದ ಮುಂದೆ ಪಂಚಾಯಿತಿ ಮಟ್ಟದಲ್ಲಿ ಆಗಬೇಕಿದೆ. ಈ ಪ್ರಕ್ರಿಯೆಯಲ್ಲಿ ಮಕ್ಕಳನ್ನೂ ತೊಡಗಿಸಿಕೊಳ್ಳುತ್ತಿರುವುದು ಈಗಿನ ವಿಶೇಷ. ಮಕ್ಕಳಿಗಾಗಿ ನಿರ್ಮಾಣವಾಗಿರುವ ಈ ಕ್ರಿಯಾ ಯೋಜನೆ ಹಾಗೂ ಮಕ್ಕಳ ಹಕ್ಕುಗಳ ಒಡಂಬಡಿಕೆಯ ಅರಿವು ಎಲ್ಲರಿಗೂ ಇರುವುದು ಬಹಳ ಅವಶ್ಯಕ. ಜಿಲ್ಲೆಗಳು ಮತ್ತು ಪಂಚಾಯಿತಿಗಳ ಮಟ್ಟದ ಜನಪ್ರತಿನಿಧಿಗಳು ಹಾಗೂ ಅಧಿಕಾರಿಗಳಿಗೆ ಮಕ್ಕಳ ಹಕ್ಕುಗಳು ಹಾಗೂ ಮಕ್ಕಳ ಕ್ರಿಯಾಯೋಜನೆಯ ಅರಿವು ಮೂಡಿಸುವ ಕೆಲಸಗಳು ಯುದ್ಧೋಪಾದಿಯಾಗಿ ಆಗಬೇಕಾಗಿದೆ.

**ಮಕ್ಕಳನ್ನು ಕುರಿತು ಭಾರತ ಸರ್ಕಾರದ ನೀತಿ ಮತ್ತು ಕೆಲವು ಯೋಜನೆಗಳು:**

ದೇಶದ ಆಡಳಿತವೇ ಮೊದಲಾದ ವಿವಿಧ ವ್ಯವಹಾರಗಳನ್ನು ಕುರಿತು ಸರ್ಕಾರ ಹಲವಾರು ನೀತಿ, ನಿಯಮ, ಕಾನೂನು, ಯೋಜನೆಗಳನ್ನು ರೂಪಿಸುತ್ತಿರುತ್ತದೆ. ಅದರಂತೆ, ಭಾರತದ ಮಕ್ಕಳನ್ನು ಕುರಿತು ಅನೇಕ ನಿಯಮಗಳು, ರಾಷ್ಟ್ರೀಯ ಮತ್ತು ರಾಜ್ಯ ಮಟ್ಟದಲ್ಲಿ ನೀತಿಗಳು ಮತ್ತು ಯೋಜನೆಗಳು ಜಾರಿಯಲ್ಲಿವೆ. ರಾಷ್ಟ್ರೀಯ ನೀತಿಗಳು ಮಕ್ಕಳನ್ನು ಕುರಿತಂತೆ ರಾಷ್ಟ್ರ ಮತ್ತು ರಾಜ್ಯ ಸರ್ಕಾರಗಳು ನಿರ್ಮಿಸಬೇಕಿರುವ ಯೋಜನೆಗಳು ಮತ್ತು

ಹಣಕಾಸು ಮೀಸಲು ಅಷ್ಟೇ ಅಲ್ಲದೆ ಮುಂದೆ ಕೈಗೊಳ್ಳಬೇಕಾದ ಕ್ರಮಗಳನ್ನು ಕುರಿತು ಸೂಚಿಸುತ್ತವೆ. ಅಂತಹ ಕೆಲವು ನೀತಿಗಳು ಮತ್ತು ಯೋಜನೆಗಳು ಈ ಮುಂದಿವೆ:

- ರಾಷ್ಟ್ರೀಯ ಮಕ್ಕಳ ನೀತಿ ೧೯೭೪
- ರಾಷ್ಟ್ರೀಯ ಶಿಕ್ಷಣ ನೀತಿ ೧೯೮೬
- ಬಾಲಕಾರ್ಮಿಕ ಪದ್ಧತಿ ಕುರಿತು ರಾಷ್ಟ್ರೀಯ ನೀತಿ ೧೯೮೭
- ಹೆಣ್ಣು ಮಕ್ಕಳನ್ನು ಕುರಿತು ಸಾರ್ಕ್ ದಶಕದ ರಾಷ್ಟ್ರೀಯ ಯೋಜನೆ ೧೯೯೧ – ೨೦೦೦
- ರಾಷ್ಟ್ರೀಯ ಮಕ್ಕಳ ಕ್ರಿಯಾ ಯೋಜನೆ ೧೯೯೨ / ೨೦೦೪
- ರಾಜ್ಯ ಮಕ್ಕಳ ಕ್ರಿಯಾ ಯೋಜನೆ ೧೯೯೩ / ೨೦೦೩
- ರಾಷ್ಟ್ರೀಯ ಪೌಷ್ಟಿಕತೆ ಕುರಿತು ನೀತಿ ೧೯೯೩
- ರಾಷ್ಟ್ರೀಯ ಜನಸಂಖ್ಯೆ ನೀತಿ ೨೦೦೦
- ರಾಷ್ಟ್ರೀಯ ಆರೋಗ್ಯ ನೀತಿ ೨೦೦೧

**ರಾಷ್ಟ್ರೀಯ ಮಕ್ಕಳ ನೀತಿ ೧೯೭೪:**

ಮಕ್ಕಳು ರಾಷ್ಟ್ರದ ಪ್ರಮುಖ ಸಂಪತ್ತು ಮತ್ತು ರಾಷ್ಟ್ರದ ಎಲ್ಲ ಯೋಜನೆಗಳಲ್ಲಿ ಮಕ್ಕಳಿಗೆ ಆದ್ಯತೆಯನ್ನು ನೀಡಬೇಕು, ಮಕ್ಕಳ ವಿಚಾರಗಳಿಗೆ, ಮಾನವ ಸಂಪನ್ಮೂಲ ಅಭಿವೃದ್ಧಿಗೆ ಅತ್ಯಂತ ಗರಿಷ್ಠ ಪ್ರಮಾಣದ ಹಣಕಾಸು ನಿಗದಿ ಮಾಡಬೇಕು ಎಂದು ರಾಷ್ಟ್ರೀಯ ಮಕ್ಕಳ ನೀತಿ ಹೇಳಿದೆ. ಈ ನೀತಿಯ ಕೆಲವು ಉದ್ದೇಶಗಳು ಈ ಮುಂದಿನಂತಿವೆ:

- ಮಕ್ಕಳು ಜನಿಸುವ ಮೊದಲು ಮತ್ತು ಜನಿಸಿದ ನಂತರ ಹಾಗೂ ಮಕ್ಕಳು ಬೆಳೆಯುತ್ತಿರುವ ವಿವಿಧ ಘಟ್ಟಗಳಲ್ಲಿ ಮಕ್ಕಳಿಗೆ ಅತ್ಯುತ್ತಮವಾದ ಸಾಕಷ್ಟು ಸೇವೆಗಳನ್ನು ಒದಗಿಸಬೇಕು.
- ಮಕ್ಕಳ ದೈಹಿಕ, ಮಾನಸಿಕ ಮತ್ತು ಸಾಮಾಜಿಕ ಅಭಿವೃದ್ಧಿಯನ್ನು ಖಾತರಿಗೊಳಿಸಬೇಕು.
- ಭಾರತದ ಎಲ್ಲ ಮಕ್ಕಳು ಸಮತೋಲನವಾದ ಅಭಿವೃದ್ಧಿ, ಬೆಳವಣಿಗೆಯನ್ನು ಸಾಧಿಸಲು ಈಗಿರುವ ಸೇವೆಗಳನ್ನು ನಿರ್ದಿಷ್ಟ ಅವಧಿಯೊಳಗೆ ವಿಸ್ತರಿಸಬೇಕು ಮತ್ತು ಅವುಗಳ ಗುಣಮಟ್ಟವನ್ನು ಅಭಿವೃದ್ಧಿಪಡಿಸಬೇಕು.

**ಈ ರಾಷ್ಟ್ರೀಯ ನೀತಿಯ ಕೆಲವು ಪ್ರಮುಖ ಲಕ್ಷಣಗಳು ಇಂತಿವೆ:**

➢ ಎಲ್ಲ ಮಕ್ಕಳಿಗೂ ತಲುಪುವಂತಹ ಸಮಗ್ರ ಆರೋಗ್ಯ ಕಾರ್ಯಕ್ರಮವನ್ನು ಕೈಗೊಳ್ಳುವುದು

- ಮಕ್ಕಳ ಅಪೌಷ್ಟಿಕತೆ ತಡೆಯಲು ಮತ್ತು ಅಪೌಷ್ಟಿಕತೆ ಸಂಬಂಧಿತ ಸಮಸ್ಯೆಗಳನ್ನು ತೊಡೆಯಲು ಪೌಷ್ಟಿಕ ಆಹಾರದ ಸರಬರಾಜು
- ಗರ್ಭಿಣಿಯರು ಮತ್ತು ನವಜಾತ ಶಿಶುಗಳ ತಾಯಂದಿರ ಆರೋಗ್ಯ ವೃದ್ಧಿ, ಪೌಷ್ಟಿಕಾಂಶದಲ್ಲಿ ಹೆಚ್ಚಳ, ಮಕ್ಕಳ ಲಾಲನೆ ಪಾಲನೆಯ ವಿಚಾರಗಳನ್ನು ಮನನ ಮಾಡಿಸಲು ಶಿಕ್ಷಣ ಕಾರ್ಯಕ್ರಮಗಳನ್ನು ಕೈಗೊಳ್ಳುವುದು.
- ೧೪ ವರ್ಷದೊಳಗಿನ ಎಲ್ಲ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಒದಗಿಸುವುದು
- ಅವಶ್ಯವಿದ್ದಲ್ಲಿ ಅನೌಪಚಾರಿಕ ಶಿಕ್ಷಣ ವ್ಯವಸ್ಥೆ ಮಾಡುವುದು
- ದೈಹಿಕ ಶಿಕ್ಷಣ, ಆಟೋಟಗಳು, ಮತ್ತಿತರ ಚಟುವಟಿಕೆಗಳು ಹಾಗೂ ಸಾಂಸ್ಕೃತಿಕ ಮತ್ತು ವೈಜ್ಞಾನಿಕ ಚಟುವಟಿಕೆಗಳನ್ನು ಶಾಲೆಗಳಲ್ಲಿ, ಸಮುದಾಯಗಳಲ್ಲಿ ಹಾಗೂ ಇನ್ನಿತರ ಕೇಂದ್ರಗಳಲ್ಲಿ ನಡೆಸುವುದು
- ಎಲ್ಲ ಮಕ್ಕಳಿಗೂ ಸಮಾನವಾದ ಅವಕಾಶಗಳನ್ನು ಕಲ್ಪಿಸುವುದನ್ನು ಖಾತರಿಗೊಳಿಸುವುದು
- ಸಾಮಾಜಿಕವಾಗಿ, ದೈಹಿಕವಾಗಿ, ಆರ್ಥಿಕವಾಗಿ, ಮಾನಸಿಕವಾಗಿ ಹಾಗೂ ಇನ್ನಿತರ ಕಾರಣಗಳಿಂದಾಗಿ ಹಿಂದುಳಿದ ಅಥವಾ ಅವಕಾಶ ವಂಚಿತರಾದ ಮಕ್ಕಳಿಗೆ ವಿಶೇಷವಾದ ಅವಕಾಶಗಳನ್ನು (ಶಿಕ್ಷಣ, ತರಬೇತಿ, ಪುನರ್ವಸತಿ) ಒದಗಿಸುವುದು
- ಮಕ್ಕಳನ್ನು ಉಪೇಕ್ಷೆ, ಕ್ರೌರ್ಯ, ಮತ್ತು ಶೋಷಣೆಯ ವಿರುದ್ಧ ರಕ್ಷಿಸಬೇಕು
- ೧೪ ವರ್ಷದೊಳಗಿನ ಯಾವುದೇ ಮಗುವನ್ನು ಯಾವುದೇ ರೀತಿಯ ಅಪಾಯಕಾರಿ ವೃತ್ತಿಗಳಲ್ಲಿ ತೊಡಗಿಸಬಾರದು
- ಎಂತಹದೇ ಪ್ರಾಕೃತಿಕ ಅಥವಾ ಮಾನವ ನಿರ್ಮಿತ ಅವಘಡಗಳಾದಾಗ ಮಕ್ಕಳಿಗೆ ಆದ್ಯತೆಯಿಂದ ಅವಕಾಶಗಳನ್ನು, ರಕ್ಷಣೆಯನ್ನು ನೀಡಬೇಕು
- ವಿಶೇಷವಾದ ಕೌಶಲ್ಯಗಳಿರುವ ಮಕ್ಕಳನ್ನು ಪ್ರೋತ್ಸಾಹಿಸಲು ವಿಶೇಷ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕು
- ದೇಶದ ಎಲ್ಲ ಕಾನೂನು, ಕಾಯಿದೆಗಳಿಗೆ ಅವಶ್ಯವಿರುವ ತಿದ್ದುಪಡಿಗಳನ್ನು ಮಾಡಿ ಮಕ್ಕಳ ವಿಚಾರಗಳನ್ನೊಳಗೊಂಡಿರುವ ಯಾವುದೇ ಖಟ್ಲೆಗಳಲ್ಲಿ ಮಕ್ಕಳಿಗೆ ಹಿತವನ್ನುಂಟುಮಾಡುವ ರೀತಿಯಲ್ಲಿ ತೀರ್ಪುಗಳು ಬರುವಂತೆ ಏರ್ಪಾಡು ಮಾಡಬೇಕು
- ಕೌಟುಂಬಿಕ ಸಂಬಂಧಗಳನ್ನು ಬಲಪಡಿಸಬೇಕು
- ಮಕ್ಕಳ ಅವಶ್ಯಕತೆಗಳನ್ನು ಪೂರೈಸಲು ರಾಷ್ಟ್ರೀಯ ಮಕ್ಕಳ ಮಂಡಳಿಯನ್ನು ಆರಂಭಿಸುವುದು
- ಮಕ್ಕಳಿಗಾಗಿ ಕಾರ್ಯಕ್ರಮಗಳನ್ನು ಕೈಗೊಳ್ಳಲು ಸ್ವಯಂಸೇವಾ ಸಂಘಟನೆಗಳಿಗೆ ಹೆಚ್ಚಿನ ಹಣಕಾಸಿನ ನೆರವು ನೀಡುವುದು

ಕ್ಕಳ ಹಕ್ಕುಗಳ ಒಡಂಬಡಿಕೆ ಜಾರಿಯಾದ ಮೇಲೆ ಈ ನೀತಿ ಹಳತಾಗಿದೆ ಮತ್ತು ಇದರಲ್ಲಿ ಎಷ್ಟೋ ದಲಾವಣೆಗಳು ಆಗಬೇಕಿದೆ. ೨೦೦೮ರಲ್ಲಿ ಈ ಕುರಿತು ಚರ್ಚೆಗಳು ನಡೆದಿದ್ದು ಹೊಸ ರಾಷ್ಟ್ರೀಯ ಮಕ್ಕಳ ನೀತಿ ಹೊರಬರುವ ಸಾಧ್ಯತೆಗಳು ಇವೆ.

**ರಾಷ್ಟ್ರೀಯ ಶಿಕ್ಷಣ ನೀತಿ ೧೯೮೬ (೧೯೯೨ರಲ್ಲಿ ತಿದ್ದುಪಡಿಯಾಗಿದೆ):**

ಎಲ್ಲರಿಗೂ ಶಿಕ್ಷಣ ಒದಗಿಸುವ ದಿಶೆಯಲ್ಲಿ ಭಾರತದಲ್ಲಿ ಹಲವಾರು ಕ್ರಮಗಳನ್ನು ಕೈಗೊಳ್ಳಲಾಗಿದೆ. ೧೯೯೨ರಲ್ಲಿ ಸರ್ವೋಚ್ಚ ನ್ಯಾಯಾಲಯವು ನೀಡಿದ ತೀರ್ಪಿನನ್ವಯ ಶಿಕ್ಷಣದ ಹಕ್ಕು ಹಲವಾರು ಸುತ್ತಿನ ಮಾತುಕತೆಗಳು ನಡೆದಿವೆ. ೨೦೦೧ರಲ್ಲಿ ಭಾರತ ಸಂವಿಧಾನಕ್ಕೆ ತಿದ್ದುಪಡಿಯಾಗಿ ಶಿಕ್ಷಣ ಒಂದು ಹಕ್ಕಾಗಿದೆ. ಈ ಹಿಂದೆ ನಡೆದ ರಾಷ್ಟ್ರೀಯ ಶಿಕ್ಷಣ ಮಿಷನ್, ಎಲ್ಲರಿಗೂ ಶಿಕ್ಷಣ ಮತ್ತು ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆಗಳು ನಡೆದು, ಈಗ ಸರ್ವ ಶಿಕ್ಷಣ ಕಾರ್ಯಕ್ರಮಗಳು ನಡೆದಿವೆ.

**ಬಾಲಕಾರ್ಮಿಕ ಪದ್ಧತಿ ಕುರಿತು ರಾಷ್ಟ್ರೀಯ ನೀತಿ ೧೯೮೭:**

ದೇಶದಲ್ಲಿನ ಬಾಲಕಾರ್ಮಿಕ ಪದ್ಧತಿಯನ್ನು ಬುಡಸಮೇತ ಹೊಡೆದೋಡಿಸಲೆಂದೇ ಈ ನೀತಿಯನ್ನು ರೂಪಿಸಲಾಯಿತು. ಆದಾಗ್ಯೂ ಶಿಕ್ಷಣ ಇಲಾಖೆ, ಪೋಲೀಸ್ ಇಲಾಖೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಹಾಗೂ ಆರೋಗ್ಯ ಇಲಾಖೆಯ ಸಹಕಾರವಿಲ್ಲದೆ ಈ ನೀತಿಯ ಸಂಪೂರ್ಣ ಜಾರಿ ಕಷ್ಟವೇ ಸರಿ. ಕಾನೂನು ಜಾರಿಗಾಗಿ ಕ್ರಿಯಾ ಯೋಜನೆ, ಕೇಂದ್ರ ಸರ್ಕಾರದ ಕಾರ್ಯಕ್ರಮಗಳು ಮತ್ತು ಯೋಜನೆಗಳನ್ನು ಆಧರಿಸಿದ ಕೆಲವು ಕಾರ್ಯಕ್ರಮಗಳನ್ನು ಈ ನೀತಿ ನಿರ್ದೇಶಿಸಿತ್ತು.

**ಹೆಣ್ಣು ಮಕ್ಕಳನ್ನು ಕುರಿತು ಸಾರ್ಕ್ ದಶಕದ ರಾಷ್ಟ್ರೀಯ ಯೋಜನೆ ೧೯೯೧ – ೨೦೦೦:**

ಹೆಣ್ಣು ಮಕ್ಕಳನ್ನು ಕುರಿತು ವಿಶೇಷವಾದ ಕಾಳಜಿ ವ್ಯಕ್ತಪಡಿಸಬೇಕೆಂದು ಸಾರ್ಕ್ ದೇಶಗಳು ನಿರ್ಧರಿಸಿದಾಗ ಭಾರತ ಸರ್ಕಾರವೂ ೧೯೯೨ – ೨೦೦೦ದವರೆಗೆ ಜಾರಿಗೆ ಬರುವಂತೆ ಹೆಣ್ಣುಮಕ್ಕಳಿಗಾಗಿ ಕ್ರಿಯಾ ಯೋಜನೆಯನ್ನು ರೂಪಿಸಿತು. ಅದರ ಪ್ರಮುಖ ವಿಚಾರಗಳು:

- ಹೆಣ್ಣು ಭ್ರೂಣ ಹತ್ಯೆ, ಹೆಣ್ಣು ಮಕ್ಕಳ ಪೌಷ್ಟಿಕಾಂಶ ವೃದ್ಧಿ ಮತ್ತು ಹೆಣ್ಣು ಮಕ್ಕಳ ಜೀವಿಸುವ ಅವಕಾಶಗಳನ್ನು ಹೆಚ್ಚಿಸುವುದು
- ಸುರಕ್ಷಿತ ತಾಯ್ತನ
- ಹೆಣ್ಣು ಮಕ್ಕಳ ಸಮಗ್ರ ಅಭಿವೃದ್ಧಿ
- ತೊಂದರೆಗಳಿಗೆ ಈಡಾಗಬಹುದಾದ ಹೆಣ್ಣು ಮಕ್ಕಳ ರಕ್ಷಣೆ
- ಪೋಷಣೆ ಮತ್ತು ರಕ್ಷಣೆಯ ಅವಶ್ಯಕತೆ ಇರುವ ಹೆಣ್ಣು ಮಕ್ಕಳಿಗೆ ವಿಶೇಷವಾದ ಸೌಲಭ್ಯಗಳನ್ನು ಒದಗಿಸುವುದು.

## ರಾಷ್ಟ್ರೀಯ ಮಕ್ಕಳ ಕ್ರಿಯಾ ಯೋಜನೆ ೧೯೯೨ / ೨೦೦೪ ಮತ್ತು ರಾಜ್ಯ ಮಕ್ಕಳ ಕ್ರಿಯಾ ಯೋಜನೆ ೧೯೯೩ / ೨೦೦೩

ಮಕ್ಕಳ ಹಕ್ಕುಗಳ ಒಡಂಬಡಿಕೆಗೆ ೧೯೯೨ರಲ್ಲಿ ಒಪ್ಪಿಗೆ ಸೂಚಿಸಿದ ಮೇಲೆ ಮಕ್ಕಳಿಗಾಗಿ ಕ್ರಿಯಾ ಯೋಜನೆಗಳನ್ನು ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ನಿರ್ಮಿಸಿದವು. ಭಾರತದಲ್ಲಿ ಈಗಾಗಲೇ ಎರಡು ಬಾರಿ ಕ್ರಿಯಾ ಯೋಜನೆಗಳನ್ನು ನಿರ್ಮಿಸಲಾಗಿದೆ. ಆದರೆ, ಈ ಕ್ರಿಯಾ ಯೋಜನೆಗಳಿಗೆ ಪ್ರತ್ಯೇಕವಾದ ಹಣಕಾಸು ನಿಗದಿ ಮಾಡುವುದಾಗಲೀ, ಕ್ರಿಯಾ ಯೋಜನೆಗಳನ್ನು ವಿಮರ್ಶಿಸುವ ಹಾಗೂ ಕ್ರಿಯಾ ಯೋಜನೆಗಳಲ್ಲಿ ನಿಗದಿಪಡಿಸಲಾಗಿರುವ ಗುರಿಗಳನ್ನು ಸಾಧಿಸಿರುವ ಕುರಿತು ವರದಿಗಳನ್ನು ಪ್ರಕಟಿಸುವ ಗೋಜಿಗೆ ಸರ್ಕಾರ ಇದುವರೆಗೂ ಹೋಗಿಲ್ಲ. ಈ ಎಲ್ಲವೂ ಕೇವಲ ತೋರಿಕೆಯೋ ಎಂಬಂತಾಗಿದೆ. ಕ್ರಿಯಾ ಯೋಜನೆಗಳಲ್ಲಿರುವ ಮುಖ್ಯವಾದ ವಿಚಾರಗಳು ಈ ಮುಂದಿನಂತಿವೆ:

- ಎಲ್ಲ ಮಕ್ಕಳನ್ನೂ ತಲುಪಲು ಸಮಗ್ರ ಯೋಜನೆ
- ಶಿಶು ಮರಣ, ಮಕ್ಕಳ ಮರಣ ತಡೆ
- ತಾಯಂದಿರ ಮರಣ ಪ್ರಮಾಣ ಕಡಿಮೆಗೊಳಿಸುವುದು
- ಎಲ್ಲ ಮಕ್ಕಳಿಗೂ ರೋಗ ನಿರೋಧಕಗಳನ್ನು ಹಾಕಿಸುವುದು
- ಮಕ್ಕಳ ಅಪೌಷ್ಟಿಕತೆಯನ್ನು ತಡೆಯುವುದು
- ಮಕ್ಕಳಿಗೆ ಸುರಕ್ಷಿತವೂ ಮತ್ತು ಶುದ್ಧವೂ ಆದ ನೀರು ಒದಗಿಸುವುದು
- ಎಲ್ಲ ಮಕ್ಕಳ ಜನ್ಮ ದಾಖಲೆ
- ಅಂಗವಿಕಲತೆ ಇರುವ ಮಕ್ಕಳಿಗೆ ವಿಶೇಷ ಸೌಲಭ್ಯಗಳು
- ಬಾಲ್ಯ ವಿವಾಹ ತಡೆ
- ಮಕ್ಕಳ ಆರೋಗ್ಯ ಸುಧಾರಣೆ ಮತ್ತು ಆರೋಗ್ಯ / ಚಿಕಿತ್ಸೆ ಸೌಲಭ್ಯಗಳು ದೊರೆಯುವಂತೆ ಮಾಡುವುದು
- ಎಲ್ಲ ಮಕ್ಕಳಿಗೂ ಪ್ರಾಥಮಿಕ ಪೂರ್ವ ಶಿಕ್ಷಣ ಅವಕಾಶಗಳು
- ಎಲ್ಲ ಮಕ್ಕಳಿಗೂ ಉಚಿತ ಮತ್ತು ಕಡ್ಡಾಯ ಶಿಕ್ಷಣ ಸೌಲಭ್ಯ – ಎಲ್ಲ ಮಕ್ಕಳ ಶಾಲಾ ದಾಖಲೆ, ದಾಖಲಾದ ಮಕ್ಕಳನ್ನು ಶಾಲೆಯಲ್ಲಿ ಉಳಿಸಿಕೊಳ್ಳುವುದು, ಅವರ ಶಿಕ್ಷಣದ ಮಟ್ಟ ಸುಧಾರಣೆ ಹಾಗೂ ಮುಂದುವರಿದ ಶಿಕ್ಷಣ ಸೌಲಭ್ಯಗಳು
- ವಯಸ್ಕರ ಶಿಕ್ಷಣದಲ್ಲಿ ಗಮನಾರ್ಹ ಸಾಧನೆ
- ಎಲ್ಲ ಮಕ್ಕಳನ್ನು ಎಲ್ಲ ರೀತಿಯ ತಾರತಮ್ಯಗಳ ವಿರುದ್ಧ, ದೌರ್ಜನ್ಯ, ಹಿಂಸೆ, ಶೋಷಣೆಗಳ ವಿರುದ್ಧ ರಕ್ಷಿಸುವುದು

೧೪ ವರ್ಷದೊಳಗಿನ ಯಾವುದೇ ಮಗುವನ್ನು ಯಾವುದೇ ರೀತಿಯ ದುಡಿಮೆಗೆ ಹಚ್ಚದಿರುವುದು

- ಮಕ್ಕಳ ಪರವಾದ ಕಾನೂನು, ನಿಯಮಗಳ ರಚನೆ ಹಾಗೂ ಮಕ್ಕಳ ಪರವಾದ ನಿಲುವುಗಳನ್ನು ಬೆಳೆಸಲು ಸಾರ್ವಜನಿಕರನ್ನು ಪಾಲ್ಗೊಳ್ಳುವುದು
- ಮಕ್ಕಳ ಹಕ್ಕುಗಳ ರಕ್ಷಣೆಗಾಗಿ ರಾಷ್ಟ್ರೀಯ ಮಕ್ಕಳ ಆಯೋಗವನ್ನು ರಚಿಸುವುದು

### ರಾಷ್ಟ್ರೀಯ ಪೌಷ್ಟಿಕತೆ ಕುರಿತು ನೀತಿ ೧೯೯೩

ಭಾರತ ದೇಶದಲ್ಲಿ ಸುಮಾರು ಪ್ರತಿಶತ ೫೦ರಷ್ಟು ಮಕ್ಕಳು ಅಪೌಷ್ಟಿಕತೆಯಿಂದ ಬಳಲುತ್ತಿದ್ದಾರೆ ಎನ್ನುವ ವರದಿ ಯಾರನ್ನಾದರೂ ಅಧೀರರನ್ನಾಗಿಸುತ್ತದೆ. ಆಹಾರದ ಅಲಭ್ಯತೆಯೊಂದೇ ಇದಕ್ಕೆ ಕಾರಣವಲ್ಲವೆಂದು ಹೇಳುವ ರಾಷ್ಟ್ರೀಯ ನೀತಿ, ಆಹಾರದ ಬಳಕೆ, ಆಹಾರದ ವಿತರಣೆ ಹಾಗೂ ಆಹಾರ ಕುರಿತು ಇರುವ ಅವೈಜ್ಞಾನಿಕ ನಿಲುವುಗಳು, ಅಶುದ್ಧವಾದ ನೀರು ಮತ್ತು ಪಾತ್ರೆಗಳ ಬಳಕೆ ಅಷ್ಟೇ ಅಲ್ಲದೆ ಆಹಾರ ತಯಾರಿಯಲ್ಲಿರುವ ದೋಷಗಳನ್ನು ಎತ್ತಿ ತೋರುತ್ತದೆ. ಜನರಲ್ಲಿ ಹಣವಿಲ್ಲದಿರುವುದನ್ನೂ ಸಹ ಒಪ್ಪಿಕೊಳ್ಳುವ ಈ ನೀತಿ, ಜನರ ಪೌಷ್ಟಿಕತೆಯನ್ನು ಅಭಿವೃದ್ಧಿಗೊಳಿಸದಿದ್ದಲ್ಲಿ ದೇಶ ಎದುರಿಸಬೇಕಾದ ಸಮಸ್ಯೆಯನ್ನು ಎತ್ತಿ ತೋರುತ್ತದೆ.

### ರಾಷ್ಟ್ರೀಯ ಜನಸಂಖ್ಯೆ ನೀತಿ ೨೦೦೦

ಭಾರತ ದೇಶದ ಅತಿ ದೊಡ್ಡ ಆಸ್ತಿ ಮತ್ತು ಶಕ್ತಿ ನಮ್ಮ ಜನ / ಮಾನವ ಸಂಪನ್ಮೂಲ. ಹಾಗೆಂದು ೧೦೦ಕೋಟಿ ದಾಟಿರುವ ಜನಸಂಖ್ಯೆಯನ್ನು ಇನ್ನೂ ಬೆಳೆಯಲು ಬಿಡುವುದೇ ನಮ್ಮ ದೌರ್ಬಲ್ಯವಾಗಬಹುದು. ಇಷ್ಟು ಜನರಿಗೆ ಇರಲು ಜಾಗ, ಆಹಾರ, ಬಟ್ಟೆ, ಓಡಾಟ, ಶಿಕ್ಷಣ, ಮನೆ ಹೀಗೆ ಎಲ್ಲವನ್ನೂ ಒದಗಿಸಲು ಭಾರತ ಎದುರಿಸಬೇಕಾದ ಸಮಸ್ಯೆಗಳನ್ನು ಪಟ್ಟಿ ಮಾಡಿರುವ ಈ ನೀತಿ, ಜನಸಂಖ್ಯೆಯ ವೃದ್ಧಿಯನ್ನು ತಡೆಯಲು ಯೋಜನೆಗಳು, ನಿಯಮಗಳು ಹಾಗೂ ಸಲಹೆಗಳನ್ನು ನೀಡುತ್ತದೆ. ಬಹಳ ಪ್ರಮುಖವಾಗಿ ಎದ್ದು ಕಾಣುವ ಅಂಶಗಳು ಮಕ್ಕಳ ಉಳಿವಿನ ಸಾಧ್ಯತೆಗಳನ್ನು ಹೆಚ್ಚಿಸುವುದು, ಅತ್ಯುತ್ತಮವಾದ ಆರೋಗ್ಯ ಸೌಲಭ್ಯಗಳು, ಎರಡು ಮಕ್ಕಳ ಹುಟ್ಟಿನ ನಡುವೆ ಅಂತರ, ವಿವಾಹದ ವಯಸ್ಸನ್ನು ಹೆಚ್ಚಿಸುವುದು, ತಡವಾಗಿ ಮಕ್ಕಳನ್ನು ಮಾಡಿಕೊಳ್ಳುವುದು, ಎರಡೇ ಮಕ್ಕಳಿಗೆ ಪ್ರತಿಯೊಬ್ಬರೂ ಬದ್ಧರಾಗುವುದೇ ಮೊದಲಾದ ವಿಚಾರಗಳನ್ನು ರೂಪಿಸಿದೆ.

### ರಾಷ್ಟ್ರೀಯ ಆರೋಗ್ಯ ನೀತಿ ೨೦೦೧

ಶಿಶು ಮರಣ ತಡೆ ಮತ್ತು ಮಕ್ಕಳ ಮರಣ ತಡೆಯನ್ನೇ ಮುಂದಿಟ್ಟುಕೊಂಡು, ಆರೋಗ್ಯಕ್ಕೆ ಸಂಬಂಧಿಸಿದ ಇನ್ನೂ ಅನೇಕ ಸಂಗತಿಗಳನ್ನು ಈ ನೀತಿ ವಿವರಿಸುತ್ತದೆ. ಎಲ್ಲರಿಗೂ ಆರೋಗ್ಯ ಎಂದು ಕೇವಲ ಘೋಷಿಸಿದರೆ ಸಾಲದು, ಆರೋಗ್ಯ ಸೌಲಭ್ಯಗಳು ಪ್ರತಿಯೊಂದು ಮೂಲೆಮೂಲೆಯ ಹಳ್ಳಿಗಳಿಗೂ

ಲುಪುವಂತಾಗಬೇಕು, ಆರೋಗ್ಯ ವ್ಯವಸ್ಥೆ ವಿಕೇಂದ್ರೀಕರಣಗೊಳ್ಳಬೇಕು, ಸುಲಭವಾಗಿ ಮತ್ತು ಖರ್ಚಿಲ್ಲದೆ ಆರೋಗ್ಯ ಸೌಲಭ್ಯ, ಸೇವೆಗಳು ದೊರಕಬೇಕೆಂದು ಈ ನೀತಿ ಹೇಳುತ್ತದೆ.

**ಕರ್ನಾಟಕದಲ್ಲಿ ಮಕ್ಕಳ ಸ್ಥಿತಿಗತಿ:**

ಕರ್ನಾಟಕ ರಾಜ್ಯ ಸರ್ಕಾರದ ಅನೇಕ ವರದಿಗಳು ತೋರುವಂತೆ ನಮ್ಮ ರಾಜ್ಯವು, ದೇಶದ ವಿವಿಧ ರಾಜ್ಯಗಳಿಗೆ ಹೋಲಿಸಿದರೆ ಹಲವು ಪ್ರಗತಿಗಳನ್ನು ಸಾಧಿಸಿದೆ. ರಾಜ್ಯದ ಆರ್ಥಿಕ ಪ್ರಗತಿ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನದ ಅಭಿವೃದ್ಧಿಯನ್ನು ಬಿಂಬಿಸುವ ವರದಿಗಳೇ ಹೆಚ್ಚು. ಇದರೊಂದಿಗೆ ನಮ್ಮಲ್ಲಿ ಆಗುತ್ತಿರುವ ಉನ್ನತ ಶಿಕ್ಷಣ ಕ್ರಾಂತಿಯನ್ನೂ ಹೆಮ್ಮೆಯಿಂದ ವರದಿ ಮಾಡಲಾಗುತ್ತಿದೆ. ಅದರೆ, ಮಾನವ ಅಭಿವೃದ್ಧಿಯ ಹಿನ್ನೆಲೆಯಲ್ಲಿ ಮಕ್ಕಳ ಸ್ಥಿತಿಗತಿಯನ್ನು, ಮಕ್ಕಳ ಶಿಕ್ಷಣ, ಆರೋಗ್ಯ, ರಕ್ಷಣೆ, ಪ್ರೀತಿ ಮತ್ತು ಆರೈಕೆಯನ್ನು ನೀಡುವುದು ಹಾಗೂ ಮಕ್ಕಳ ವಿಚಾರಗಳನ್ನು ಕುರಿತು ಮಕ್ಕಳ ಭಾಗವಹಿಸುವಿಕೆಯ ಹಿನ್ನೆಲೆಯಲ್ಲಿ ಮಕ್ಕಳ ಸ್ಥಿತಿಗತಿಯನ್ನು ಅರ್ಥ ಮಾಡಿಕೊಳ್ಳುವುದು ಅತ್ಯವಶ್ಯಕ.

*** ಇಲ್ಲಿ ನೀಡಲಾಗಿರುವ ಅಂಕಿಸಂಖ್ಯೆಗಳನ್ನು ರಾಜ್ಯ ಸರ್ಕಾರದ ವಿವಿಧ ವರದಿಗಳು ಹಾಗೂ ರಾಷ್ಟ್ರೀಯ ಕೌಟುಂಬಿಕ ಆರೋಗ್ಯ ಸಮೀಕ್ಷೆ ೩ರಿಂದ ತೆಗೆದುಕೊಳ್ಳಲಾಗಿದೆ.**

*ಶಿಕ್ಷಣ*

೧. ೩ರಿಂದ ೬ ವರ್ಷದೊಳಗಿನ ೩೯% ಮಕ್ಕಳು ಮಾತ್ರ ಸರ್ಕಾರಿ ಅಂಗನವಾಡಿ ಕೇಂದ್ರಗಳಿಗೆ ಹಾಜರಾಗುತ್ತಾರೆ. ಖಾಸಗಿ ವಲಯಕ್ಕೆ ೨೩% ಮಕ್ಕಳು ಹೋಗುತ್ತಿದ್ದಾರೆ. ಉಳಿದಂತೆ ೩೮% ಮಕ್ಕಳಿಗೆ ಈ ಸೌಲಭ್ಯವಿಲ್ಲ

೨. ಶಾಲೆಯಿಂದ, ಶಿಕ್ಷಣದಿಂದ ಹೊರಗಿರುವ ೬ – ೧೪ ವರ್ಷದೊಳಗಿನ ಮಕ್ಕಳ ಸಂಖ್ಯೆ ೨೦೦೧ರಲ್ಲಿ ನಡೆದ ಸಮೀಕ್ಷೆಯ ವರದಿಯಂತೆ ೧೦,೫೩,೭೪೪. ಸೆಪ್ಟೆಂಬರ್ ೨೦೦೩ರಲ್ಲಿ ಹೊರಬಂದ ವರದಿಗಳಂತೆ ಶಾಲೆಯಿಂದ ಹೊರಗಿರುವ ಮಕ್ಕಳ ಸಂಖ್ಯೆ ೨,೦೦,೦೦೦. ಏಪ್ರಿಲ್ ೨೦೦೪ರ ವರದಿಗಳಂತೆ ಈ ಸಂಖ್ಯೆ ೬೦,೦೦೦. ಕೇಂದ್ರ ಸರ್ಕಾರ ೨೦೦೭ರಲ್ಲಿ ನೀಡಿದ ವರದಿಗಳ ಪ್ರಕಾರ ರಾಜ್ಯದಲ್ಲಿ ಶಾಲೆಯಿಂದ ಹೊರಗಿರುವ ಮಕ್ಕಳ ಸಂಖ್ಯೆ ೧,೭೪,೫೩೩. ರಾಜ್ಯದ ಶಿಕ್ಷಣ ಇಲಾಖೆಯು ೨೦೦೭ರಲ್ಲಿ ನೀಡಿದ ವರದಿಗಳಂತೆ ಕೇವಲ ೭೫,೮೨೫ ಮಕ್ಕಳು ಶಾಲೆಯಿಂದ ಹೊರಗಿದ್ದಾರೆ.

೩. ಐದನೇ ತರಗತಿ ತಲುಪುವುದರೊಳಗೆ ಶಾಲೆ ಬಿಡುವ ಮಕ್ಕಳ ಪ್ರಮಾಣ ೬೨%. (ಶಿಕ್ಷಣ ಇಲಾಖೆಯ ವರದಿಗಳು)

೪. ಶಾಲೆಗೆ ಸೇರುವ ಹೆಣ್ಣು ಮಕ್ಕಳ ಪ್ರಮಾಣ ಸಾಮಾನ್ಯವಾಗಿ ೯೬%. ೧ನೇ ತರಗತಿಯಿಂದ ೭ನೇ ತರಗತಿಗೆ ಬರುವ ಹೊತ್ತಿಗೆ ೧೨% ಹೆಣ್ಣುಮಕ್ಕಳು ಶಾಲೆ ಬಿಟ್ಟಿರುತ್ತಾರೆ. ಉಳಿದ ಎಲ್ಲ ಹೆಣ್ಣು ಮಕ್ಕಳು ಪ್ರೌಢಶಾಲೆಗೆ ಬರುವ ಹೊತ್ತಿಗೆ ಶಾಲಾ ಶಿಕ್ಷಣದಲ್ಲಿ ಉಳಿಯುವ ಹೆಣ್ಣು ಮಕ್ಕಳ ಪ್ರಮಾಣ ಕೇವಲ ೪೫%ಕ್ಕೆ ಇಳಿಯುತ್ತದೆ.

೫. ರಾಜ್ಯದಲ್ಲಿ ಒಟ್ಟಾರೆ ಮಧ್ಯದಲ್ಲೇ ಶಾಲೆ ಬಿಡುವ ಮಕ್ಕಳ ಸಂಖ್ಯೆ ೮.೨% ಆಗಿದೆ.

. ರಾಜ್ಯದಲ್ಲಿರುವ ಶಿಕ್ಷಣ ಇಲಾಖೆಯ ಶಾಲೆಗಳಲ್ಲಿ ಕೇವಲ ೪೨% ಶಾಲೆಗಳಲ್ಲಿ ಮಾತ್ರ ಹೆಣ್ಣು ಮಕ್ಕಳಿಗೆ ಪ್ರತ್ಯೇಕ ಶೌಚಾಲಯವಿದೆ ಮತ್ತು ೭೬% ಶಾಲೆಗಳಲ್ಲಿ ಮಾತ್ರ ಕುಡಿಯುವ ನೀರಿನ ಸೌಲಭ್ಯವಿದೆ.

*ರೋಗ್ಯ*

೧. ಕರ್ನಾಟಕದ ಶಿಶು ಮರಣ ಪ್ರಮಾಣ ೪೩, ಐದು ವರ್ಷದೊಳಗಿನ ಮಕ್ಕಳ ಮರಣ ಪ್ರಮಾಣ ೭೦ ,ಎಲ್ಲ ತರಹದ ರೋಗ ನಿರೋಧಕಗಳನ್ನು ತೆಗೆದುಕೊಳ್ಳುವ ಮಕ್ಕಳ ಪ್ರಮಾಣ ಶೇ. ೭೧.

೨. ಪ್ರತಿ ಲಕ್ಷ ಹೆರಿಗೆಗಳಾದಾಗ ೨೨೮ ತಾಯಂದಿರು ನಿಧನ ಹೊಂದುತ್ತಾರೆ. ವೈದ್ಯರ ಸಹಾಯದಿಂದ ಹಾಗೂ ಆಸ್ಪತ್ರೆಗಳಲ್ಲಿ ಆಗುವ ಹೆರಿಗೆಗಳ ಪ್ರಮಾಣ ೬೭%.

೩. ರಾಜ್ಯದಲ್ಲಿ ೧೮ ವರ್ಷದೊಳಗಿನ ೩೧% ಹೆಣ್ಣು ಮಕ್ಕಳಿಗೆ ಬಾಲ್ಯದಲ್ಲೇ ಮದುವೆ ಮಾಡಲಾಗುತ್ತಿದೆ. ಗರ್ಭ ಧರಿಸುವ ವಯಸ್ಸು ಸರಾಸರಿ ೧೭ವರ್ಷ ಮತ್ತು ಅವರು ಮಕ್ಕಳಿಗೆ ಜನ್ಮ ನೀಡುವ ಸರಾಸರಿ ವಯಸ್ಸು ೧೭.೬ ವರ್ಷ.



೪. ೬ –೩೫ ತಿಂಗಳ ಮಕ್ಕಳಲ್ಲಿ ರಕ್ತಹೀನತೆ ೮೩%. ಬಿಹಾರ, ಉತ್ತರಪ್ರದೇಶವನ್ನು ಬಿಟ್ಟರೆ ಕರ್ನಾಟಕದಲ್ಲಿ ಅತಿ ಹೆಚ್ಚು ಮಕ್ಕಳು ರಕ್ತಹೀನತೆಯಿಂದ ಬಳಲುತ್ತಿದ್ದಾರೆ. ಕೇವಲ ೧೭% ಮಕ್ಕಳಿಗೆ ಅನ್ನಾಂಗ ಎ (ವಿಟಮಿನ್ ಎ) ದೊರೆಯುತ್ತಿದೆ. ಇವರಲ್ಲಿ ಅತೀವವಾದ ಅಪೌಷ್ಟಿಕತೆಯನ್ನು ಹೊಂದಿರುವ ಮಕ್ಕಳ ಪ್ರಮಾಣ ೩೯%.

೫. ಹುಟ್ಟಿದ ೧೮% ಮಕ್ಕಳು ಕಡಿಮೆ ತೂಕ ಹೊಂದಿದ್ದಾರೆ. (ಹುಟ್ಟಿದಾಗ ಮಗು ಕನಿಷ್ಠ ೨೫೦೦ ಗ್ರಾಂ ಇರಲೇಬೇಕು).

೬. ಕರ್ನಾಟಕದಲ್ಲಿ ಶೇ. ೨೩ ಜನ ಐಯೋಡಿನ್ ಇಲ್ಲದ ಉಪ್ಪು ಬಳಸುತ್ತಾರೆ.

೭. ೨೦೦೧ರಲ್ಲಿ ನ್ಡೆದ ಜನಗಣತಿಯ ಪ್ರಕಾರ ೦ – ೬ ವರ್ಷದೊಳಗಿನ ಮಕ್ಕಳ ಲಿಂಗ ಪ್ರಮಾಣ ೯೪೯ (ಪ್ರತಿ ೧೦೦೦ಗಂಡು ಮಕ್ಕಳೆದುರು ಇರುವ ಹೆಣ್ಣುಮಕ್ಕಳು). ೧೫ – ೧೯ ವರ್ಷದೊಳಗಿನ ಮಕ್ಕಳಲ್ಲಿ ಲಿಂಗ ಪ್ರಮಾಣ ೯೧೨.

೮. ೧೫– ೪೯ ವರ್ಷದ ಅರ್ಧದಷ್ಟು ಮಕ್ಕಳು/ ಮಹಿಳೆಯರು ರಕ್ತಹೀನತೆಯಿಂದ ಬಳಲುತ್ತಿದ್ದಾರೆ.

*ರಕ್ಷಣೆ*

೧. ಕಾರ್ಮಿಕ ಇಲಾಖೆಯು ೨೦೦೩ರಲ್ಲಿ ನೀಡಿದ್ದ ವರದಿಯಂತೆ ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿ ೭,೧೧೨ ಮಕ್ಕಳು ಅಪಾಯಕಾರಿ ಉದ್ದಿಮೆಯಲ್ಲೂ, ೩೨,೧೮೮ ಮಕ್ಕಳು ಅಪಾಯಕಾರಿಯಲ್ಲದ ಉದ್ದಿಮೆಯಲ್ಲೂ ದುಡಿಯುತ್ತಿದ್ದಾರೆ. ಸರ್ಕಾರೇತರ ಸಂಸ್ಥೆಗಳ ಪ್ರಕಾರ ಈ ಸಂಖ್ಯೆ ಸುಮಾರು ೨೦ ಲಕ್ಷಕ್ಕೂ ಅಧಿಕ.

೨. ದುಡಿಮೆಗೆ, ಸೂಳೆಗಾರಿಕೆಗೆ ತಳ್ಳುವ ಉದ್ದೇಶದಿಂದಲೇ ಮಕ್ಕಳನ್ನು ಕದಿಯುವ, ವಂಚಿಸುವ, ಬೆದರಿಕೆ ಹಾಕಿ ಸಾಗಿಸುವ ವ್ಯಕ್ತಿಗಳು ಮತ್ತು ಗುಂಪುಗಳು ವ್ಯವಸ್ಥಿತವಾಗಿ ಕೆಲಸ ಮಾಡುತ್ತಿವೆ. ಇದನ್ನು ಮಕ್ಕಳ ಕಳ್ಳ ಸಾಗಣೆ ಮತ್ತು ಮಾರಾಟ ಎಂದು ಹೇಳಲಾಗುತ್ತದೆ. ಅತೀ ಕಡಿಮೆ ವಯಸ್ಸಿನ ಹೆಣ್ಣು ಮಕ್ಕಳನ್ನು ಸೂಳೆಗಾರಿಕೆಗೆ ಮತ್ತು ಮಾರಾಟ ಎಂದು ಹೇಳಲಾಗುತ್ತದೆ. ಸಾಗಣೆಗೊಳಗಾದ ಮಕ್ಕಳನ್ನು ಅಲ್ಲಲ್ಲಿ ಭಿಕ್ಷೆ ಬೇಡಲು, ಮಾದಕ ಬಳಸುವುದು ತೀರಾ ಸಾಮಾನ್ಯವಾಗುತ್ತಿದೆ.

ವಸ್ತುಗಳನ್ನು ಸಾಗಿಸಲು, ಶಸ್ತ್ರಾಸ್ತ್ರಗಳಾನ್ನು ಸಾಗಿಸಲು ಬಳಸಿರುವುದು ಕಂಡುಬಂದಿದೆ. ಸಮಾಜ ವಿದ್ರೋಹಿ ಗುಂಪುಗಳು ಮಕ್ಕಳನ್ನು ಕಳ್ಳತನ, ಕೊಲೆಯೇ ಮೊದಲಾದ ಕೃತ್ಯಗಳಿಗೂ ಬಳಸಿರುವ ಉದಾಹರಣೆಗಳಿವೆ.

. ಮಕಾಳನ್ನು ದುರುಪಯೋಗಿಸಿಕೊಂಡು ಅವರ ಮೇಲೆ ದೈಹಿಕ, ಲೈಂಗಿಕ ಶೋಷಣೆ ಮಾಡುವ ಉದ್ದೇಶದಿಂದಲೇ ವಿದೇಶಿಯರಷ್ಟೇ ಅಲ್ಲದೇ ಭಾರತೀಯರೂ ಸಹ ಪ್ರವಾಸೀ ಕೇಂದ್ರಗಳಿಗೆ ಬರುವ ಉದ್ದಿಮೆ ನಡೆದಿದೆ. ಇದನ್ನು ತಡೆಯುವ ಜವಾಬ್ದಾರಿ ಸ್ಥಳೀಯ ಸರ್ಕಾರಗಳಾದ್ದು.

೨. ಕರ್ನಾಟಕದಲ್ಲಿ ದೇವದಾಸಿ ಪದ್ದತಿಗೆ ಇನ್ನೂ ಕಡಿವಾಣ ಬಿದ್ದಿಲ್ಲ. ಮಕ್ಕಳನ್ನು ಶೋಷಣೆ ಮಾಡುತ್ತಿರುವ ಇನ್ನೊಂದು ಅನಿಷ್ಟ ಪದ್ಧತಿ ಬಾಲ್ಯವಿವಾಹ.

೩. ಭಾರತಕ್ಕೆ ಸ್ವಾತಂತ್ರ್ಯ ಬಂದು ೬೦ ವರ್ಷ ಕಳೆದರೂ, ನಮ್ಮ ದೇಶದಲ್ಲಿ ಹಿಂದುಳಿದ ಜಾತಿ/ವರ್ಗ, ಪರಿಶಿಷ್ಟ ಜಾತಿ/ವರ್ಗಗಳ ಸಮುದಾಯಗಳ ಎಷ್ಟೋ ಲಕ್ಷಗಟ್ಟಲೆ ಮಕ್ಕಳು ಶಾಲಾ ಶಿಕ್ಷಣದ ಅವಕಾಶವಿಲ್ಲದೆ, ಹಲವು ರೀತಿಯ ದೈಹಿಕ, ಮಾನಸಿಕ, ಲೈಂಗಿಕ, ಆರ್ಥಿಕ, ಸಾಮಜಿಕ ಶೋಷಣೆಗಳಿಗೆ ಈಡಾಗುತ್ತಿದ್ದಾರೆ.

*ಪ್ರೀತಿ ಮತ್ತು ಆರೈಕೆ*

೧. ಎಚ್.ಐ.ವಿ./ಏಡ್ಸ್ ಸೋಂಕಿಗೆ ಬಲಿಯಾಗಿರುವ ಮಕ್ಕಳ ಸಂಖ್ಯೆ ೨೦೦೧ರಲ್ಲೇ ಒಂದು ಲಕ್ಷ ೭೦ ಸಾವಿರ ಎನ್ನಲಾಗಿತ್ತು. ಇತ್ತೀಚಿನ ದಿನಗಳಲ್ಲಿ ಈ ಸಂಖ್ಯೆ ಎಷ್ಟೆಂದು ಅಂದಾಜಿಸುವುದೂ ಕಷ್ಟವಾಗುತ್ತಿದೆ.

೨. ಕರ್ನಾಟಕ ರಾಜ್ಯದಲ್ಲಿ ಬೆಂಗಳೂರು, ಮಂಗಳೂರು, ಉಡುಪಿ, ಧಾರವಾಡ, ಬಳ್ಳಾರಿ ಮತ್ತು ಮಂಡ್ಯ ಜಿಲ್ಲೆಗಳಲ್ಲಿ ಎಚ್.ಐ.ವಿ./ಏಡ್ಸ್ ಪ್ರಕರಣಗಳ ಸಂಖ್ಯೆ ಅತ್ಯಧಿಕವಾಗಿದೆ.

೩. ರಾಜ್ಯದಲ್ಲಿ ೦-೪ ವರ್ಷದ ಪ್ರತೀ ಒಂದು ಲಕ್ಷ ಮಕ್ಕಳಲ್ಲಿ ಸರಿ ಸುಮಾರು ೧,೬೮೦ ಮಕ್ಕಳಿಗೆ ವಿವಿಧ ರೀತಿಯ ಅಂಗವಿಕಲತೆ ಇದೆ. ೫-೧೨ ವರ್ಷದೊಳಗಿನ ಮಕ್ಕಳ ಗುಂಪಿನಲ್ಲಿ ಪ್ರತೀ ಒಂದು ಲಕ್ಷ ಮಕ್ಕಳಲ್ಲಿ ಸುಮಾರು ೧,೯೬೪ ಮಕ್ಕಳಲ್ಲಿ ಅಂಗವಿಕಲತೆ ಇದೆ.

೪. ಕರ್ನಾಟಕ ರಾಜ್ಯದಲ್ಲಿ ತೀರಾ ಇತ್ತೀಚೆಗೂ ಸಹ ಪೋಲಿಯೋ ಪ್ರಕರಣಗಳು ವರದಿಗಳಾಗಿವೆ. ಇದರರ್ಥ ಪೋಲಿಯೋ ರೋಗ ನಿರೋಧಕಗಳು ಎಲ್ಲ ಮಕ್ಕಳಿಗೆ ಇನ್ನೂ ತಲುಪಿಲ್ಲ. ತಲುಪಿದ್ದರೂ ಕೆಲವೆಡೆ ಆ ಲಸಿಕೆಯ ಪ್ರಭಾವ ಸರಿಯಾಗಿಲ್ಲ ಎಂಬುದು.

೫. ತಾಯ ಗರ್ಭದಲ್ಲಿರುವ ಮಗುವಿನ ಲಿಂಗ ಪತ್ತೆ ಹಚ್ಚಿ ಹೆಣ್ಣು ಭ್ರೂಣಗಳನ್ನು ಹಾಗೂ ನವಜಾತ ಹೆಣ್ಣು ಶಿಶುಗಳನ್ನು ಕೊಲ್ಲುವ ಕೆಟ್ಟ ಸಂಪ್ರದಾಯಕ್ಕೆ ಇನ್ನೂ ತಡೆ ಬಿದ್ದಿಲ್ಲ.

*ಮಕ್ಕಳ ಭಾಗವಹಿಸುವಿಕೆ*

೧. ಮಕ್ಕಳ ಭಾಗವಹಿಸುವಿಕೆ ಎನ್ನುವುದು ತೀರಾ ಇತ್ತೀಚಿನವರೆಗೆ ಕೇವಲ ಮಾತಷ್ಟೇ ಆಗಿತ್ತು. ಮಕ್ಕಳ ಭಾಗವಹಿಸುವಿಕೆ ಎಂದರೆ ಮಕ್ಕಳಿಗೆ ಸಂಬಂಧಿಸಿದ ವಿಚಾರಗಳ ಬಗ್ಗೆ ಚರ್ಚೆ, ತೀರ್ಮಾನ, ಯೋಜನೆಗಳು ಆಗಬೇಕಾದರೆ ಮಕ್ಕಳಿಗೂ ಅವರ ಅಭಿಪ್ರಾಯ ವ್ಯಕ್ತಪಡಿಸುವ ಮತ್ತು ಆ ಮೂಲಕ ಅವುಗಳು ಹೆಚ್ಚು ಹೆಚ್ಚು ಮಕ್ಕಳ ಪರವಾಗುವಂತೆ ಮಾಡುವುದಾಗಿದೆ. ಕರ್ನಾಟಕ ರಾಜ್ಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತಿ

ರಾಜ್ ಇಲಾಖೆಯ ಎದುರು ಈ ವಿಚಾರವನ್ನು ಚೈಲ್ಡ್ ರೈಟ್ಸ್ ಟ್ರಸ್ಟ್ ೨೦೦೬ರಲ್ಲಿ ತನ್ನ ಕ್ಷೇತ್ರ ಕಾರ್ಯದ ಅನುಭವ ಆಧರಿಸಿ ವಿವರಿಸಿತು. ಅದರ ಪರಿಣಾಮವಾಗಿ, ಸಿ.ಆರ್.ಟಿ. ನೀಡಿದ ಸಲಹೆಯನ್ನು ಮಾನ್ಯ ಮಾಡಿದ ಇಲಾಖೆ, ಎಲ್ಲ ಗ್ರಾಮ ಪಂಚಾಯತಿಗಳು ಪ್ರತಿ ವರ್ಷ ನವೆಂಬರ್ ತಿಂಗಳಿನಲ್ಲಿ ಒಂದು ದಿನ (ಈ ತಿಂಗಳಲ್ಲಿ ದೇಶಾದ್ಯಂತ ಮಕ್ಕಳ ದಿನಾಚರಣೆ (೧೪), ಮಕ್ಕಳ ಹಕ್ಕುಗಳ ದಿನ (೨೦), ಆಚರಿಸಲಾಗುತ್ತದೆ.) ಮಕ್ಕಳ ವಿಚಾರಗಳನ್ನು ಕೇಂದ್ರೀಕರಿಸಿ, ಮಕ್ಕಳ ಗ್ರಾಮ ಸಭೆ ಮಾಡಬೇಕೆಂದು ನಿರ್ದೇಶನ ನೀಡಿದೆ. ಇಲ್ಲಿ ವಯಸ್ಕರೊಡನೆ ಮಕ್ಕಳೂ ಸೇರಿ ಅವರವರ ಪಂಚಾಯತಿ ವ್ಯಾಪ್ತಿಯಲ್ಲಿನ ಮಕ್ಕಳ ಸ್ಥಿತಿಗತಿಯನ್ನು ಅವಲೋಕಿಸಿ ಕ್ರಮಗಳನ್ನು ಕೈಗೊಳ್ಳಲು ಯೋಜಿಸುವುದಾಗಿದೆ. ರಾಜ್ಯದ ವಿವಿಧೆಡೆ ಇಂತಹ ಮಕ್ಕಳ ಗ್ರಾಮಸಭೆಗಳು ಯಶಸ್ವಿಯಾಗಿ ನಡೆದಿರುವುದು ಹಾಗೂ ಮಖ್ಖಳು ಪರಿಣಾಮಕಾರಿಯಾಗಿ ಭಾಗವಹಿಸಿರುವುದು ಮಕ್ಕಳ ಭಾಗವಹಿಸುವಿಕೆಯ ಹಕ್ಕನ್ನು ಮಾನ್ಯ ಮಾಡುವುದರತ್ತ ದೊಡ್ಡ ಹೆಜ್ಜೆಯಾಗಿದೆ.

೨. ಶಾಲಾಭಿವೃದ್ಧಿ ಮತ್ತು ಉಸ್ತುವಾರಿ ಸಮಿತಿಗಳಲ್ಲಿ ಮಕ್ಕಳ ಪ್ರಾತಿನಿಧಿತ್ವಕ್ಕೆ ಅವಕಾಶವಿದೆ. ಆದರೆ, ಇಲ್ಲಿ ಮಕ್ಕಳ ಭಾಗವಹಿಸುವಿಕೆಯ ಬಗ್ಗೆ ಎಲ್ಲಿಂದಲೂ ಸ್ಪಷ್ಟವಾದ ವರದಿಗಳು ಬಂದಿಲ್ಲ.

ಶಿಕ್ಷಣ ಇಲಾಖೆಯ ಸುತ್ತೋಲೆಯಂತೆ ಶಾಲೆಗಳಲ್ಲಿ ಮಕ್ಕಳ ಹಕ್ಕುಗಳ ಸಂಘಗಳನ್ನು ಆರಂಭಿಸಿ ಉಲ್ಲೇಖಗಳು, ದಾಖಲೆಗಳು ಇನ್ನೂ ಅಷ್ಟಾಗಿ ದೊರಕಿಲ್ಲ. ದಾವಣಗೆರೆ ಹಾಗೂ ಗುಲ್ಬರ್ಗ ಜಿಲ್ಲೆಯಲ್ಲಿ ಯುನಿಸೆಫ್ ಯೋಜನೆಯೊಡನೆ ನಡೆದಿರುವ ಶಾಲಾ ಮಕ್ಕಳ ಕಾರ್ಯಕ್ರಮದಲ್ಲಿ ಮಕ್ಕಳ ಸಂಘವೂ ಒಂದು ಯಶಸ್ವೀ ಕಾರ್ಯಕ್ರಮವಾಗಿದೆ.




ನಕ್ಷೆ ೩.೧.೧ ಉಡುಪಿ ಜಿಲ್ಲೆಯ ನಕ್ಷೆ

# ಅಧ್ಯಾಯ ೩

# ಉಡುಪಿ ಜಿಲ್ಲೆಯಲ್ಲಿರುವ ಮಕ್ಕಳ ಹಕ್ಕುಗಳ ಕಾನೂನುಬದ್ಧ ವ್ಯವಸ್ಥೆಗಳ ಸಫಲತೆ, ವಿಫಲತೆ, ಸವಾಲು ಮತ್ತು ಸಾಧನೆಗಳು

## ಉಡುಪಿ ಜಿಲ್ಲೆಯ ಕಿರು ಪರಿಚಯ:

ಮಕ್ಕಳ ಹಕ್ಕುಗಳು, ಸಮಸ್ಯೆಗಳು ಮತ್ತು ಅಭಿವೃದ್ಧಿಯ ಅಧ್ಯಯನಕ್ಕಾಗಿ ಕ್ಷೇತ್ರಕಾರ್ಯವನ್ನು ಉಡುಪಿ ಜಿಲ್ಲೆಯಲ್ಲಿ ನಡೆಸಲಾಗಿದ್ದು, ಈ ನಿಟ್ಟಿನಲ್ಲಿ ಉಡುಪಿ ಜಲ್ಲೆಯ ಒಂದು ಕಿರುಪರಿಚಯವನ್ನು ಕೊಡುವುದು ಅವಶ್ಯಕವಾಗಿರುತ್ತದೆ. ಉಡುಪಿ ಜಿಲ್ಲೆಯು ಕರಾವಳಿ ಕರ್ನಾಟಕದ ಜಿಲ್ಲೆಯಾಗಿದೆ. ೧೯೯೭ ಆಗಸ್ಟ್ ೨೪ರಂದು ದಕ್ಷಿಣ ಕನ್ನಡ ಜಿಲ್ಲೆಯಿಂದ ವಿಭಜನೆಗೊಂಡು ಹೊಸ ಜಿಲ್ಲೆಯಾಗಿ ಪರಿವರ್ತನೆಗೊಂಡಿತು. ಪ್ರಸ್ತುತ ಜಿಲ್ಲೆಯು ಉಡುಪಿ, ಕುಂದಾಪುರ ಹಾಗೂ ಕಾರ್ಕಳ ತಾಲ್ಲೂಕುಗಳನ್ನು ಒಳಗೊಂಡಿದೆ. ಚಾರಿತ್ರಿಕವಾಗಿ ಈ ಪ್ರದೇಶವು ವಿಜಯನಗರ ರಾಜವಂಶಕ್ಕೂ ಹಾಗೂ ಬ್ರಿಟಿಷರ ಆಳ್ವಿಕೆಯಲ್ಲಿ ಮದ್ರಾಸ್ ಸರಕಾರದ ಆಡಳಿತಕ್ಕೆ ಒಳಪಟ್ಟಿತ್ತು. ದಕ್ಷಿಣ ಕನ್ನಡ ಜಿಲ್ಲೆಯಂತೆಯೇ ಉಡುಪಿ ಜಿಲ್ಲೆಯನ್ನು 'ತುಳುನಾಡು' ಎಂದು ಕರೆಯಲಾಗುತ್ತಿತ್ತು.

## ಭೌಗೋಳಿಕ ಅಂಶಗಳು:

ಉಡುಪಿ ಜಿಲ್ಲೆಯು ಕರಾವಳಿ ಕರ್ನಾಟಕದ ಜಿಲ್ಲೆಯಾಗಿದ್ದು, ಉತ್ತರದಲ್ಲಿ ಉತ್ತರಕನ್ನಡ ಜಿಲ್ಲೆ ಹಾಗೂ ದಕ್ಷಿಣದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಿದೆ. ಪೂರ್ವಕ್ಕೆ ಪಶ್ಚಿಮ ಘಟ್ಟದ ಶಿಮೊಗ್ಗ ಹಾಗೂ ಚಿಕ್ಕಮಗಳೂರು ಜಿಲ್ಲೆಗಳಿದ್ದು, ಪಶ್ಚಿಮಕ್ಕೆ ಅರಬ್ಬೀ ಸಮುದ್ರವಿದೆ. ಒಟ್ಟು ೩೫೭೫ ಚದರ ಕಿ.ಮೀ ವಿಸ್ತೀರ್ಣದ ಭೌಗೋಳಿ ಪ್ರದೇಶವನ್ನು ಹೊಂದಿರುವ ಈ ಜಿಲ್ಲೆಯು ಈ ರಾಜ್ಯದ ಒಟ್ಟು ಭೌಗೋಳಿಕ ಪ್ರದೇಶದ ಶೇಕಡಾ ೨.೦೮ ಭಾಗವನ್ನು ಹೊಂದಿದೆ. ಜಿಲ್ಲೆಯು ಮೂರು ವಿಧವಾದ ಭೌಗೋಳಿಕ ಲಕ್ಷಣವನ್ನು ಒಳಗೊಂಡಿದೆ. ಕುಂದಾಪುರ ಹಾಗೂ ಉಡುಪಿ ತಾಲ್ಲೂಕುಗಳು ಒಟ್ಟು ೯೮ ಕಿ.ಮೀ. ಉದ್ದದ ಕರಾವಳಿ ತೀರವನ್ನು ಹೊಂದಿದೆ. ಮಧ್ಯದಲ್ಲಿ ಬಯಲು ಭೂಮಿಯನ್ನು ಹೊಂದಿದ್ದು, ಕುಂದಾಪುರ ಹಾಗೂ ಕಾರ್ಕಳ ತಾಲೂಕುಗಳು ಬಯಲು ಸೀಮೆ ಹಾಗೂ ಮಲೆನಾಡು ಪ್ರದೇಶವನ್ನು ಒಳಗೊಂಡಿದೆ. ಶೇಕಡಾ ೨೬ ರಷ್ಟು ಮಲೆನಾಡು ಪ್ರದೇಶವನ್ನು ಒಳಗೊಂಡಿದ್ದು, ಅನೇಕ ನದಿಗಳ ಉಗಮ ಸ್ಥಾನ ಇದಾಗಿದ್ದು, ಮುಖ್ಯವಾಗಿ ಸೀತಾನದಿ, ಸ್ವರ್ಣನದಿ, ಶಾಂಭವಿ, ಚಕ್ರ ಹಾಗೂ ವರಾಹಿ. ಜಿಲ್ಲೆಯ ಮುಖ್ಯವಾದ ಬೆಳೆಗಳು ಭತ್ತ, ಕಬ್ಬು, ಶೇಂಗಾ, ತೆಂಗು, ಅಡಿಕೆ ಹಾಗೂ ಗೇರು.

## ಜನಸಂಖ್ಯಾ ವಿವರ:

೨೦೧೧ನೇ ಜನಗಣತಿಯ ಪ್ರಕಾರ ಉಡುಪಿ ಜಿಲ್ಲೆಯ ಒಟ್ಟು ಜನಸಂಖ್ಯೆ ೧,೧೭೭,೯೦೮. ಉಡುಪಿ ಜಿಲ್ಲೆಯ ಜನಸಂಖ್ಯೆಯ ಬೆಳವಣಿಗೆಯ ದರ ೫.೯% ಇದೆ. ಪುರುಷ ಮತ್ತು ಮಹಿಳೆಯರ ಲಿಂಗಾನುಪಾತ ೧೦೦೦:೧೦೯೩ ಹಾಗೂ ಶಿಕ್ಷಣದ ದರ ಶೇಕಡಾ ೮೬.೨೯% ಇದೆ. ಹಾಗೆಯೇ ೨೦೦೧ನೇ ಜನಗಣತಿಯ ಪ್ರಕಾರ ಜಿಲ್ಲೆ ಒಟ್ಟು ಜನಸಂಖ್ಯೆ ೧೧.೧೨ ಲಕ್ಷಗಳು, ಅದರಲ್ಲಿ ೫.೨೨ ಲಕ್ಷ ಪುರುಷರು ಹಾಗೂ ೫.೯೦ ಲಕ್ಷ

ಮಹಿಳೆಯರಿದ್ದಾರೆ. ಪುರುಷ ಮತ್ತು ಮಹಿಳೆಯರ ಲಿಂಗಾನುಪಾತ ೧೦೦೦:೧೦೩೦ ಇದು ರಾಜ್ಯದಲ್ಲೇ ಹೆಚ್ಚಿನ ಮಟ್ಟದಲ್ಲಿದೆ. ಹೆಚ್ಚಿನ ಸಂಖ್ಯೆಯಲ್ಲಿ ಜನರು ಗ್ರಾಮೀಣ ಪ್ರದೇಶದಲ್ಲಿ ವಾಸಮಾಡುತ್ತಾರೆ. ಒಟ್ಟು ಜನಸಂಖ್ಯೆಯಲ್ಲಿ ೯.೦೬ ಲಕ್ಷ (೮೨%) ಜನರು ಗ್ರಾಮೀಣ ಭಾಗದಲ್ಲಿ ವಾಸವಾಗಿದ್ದು, ೨.೦೬ ಲಕ್ಷ (೧೮%) ಜನರು ನಗರ ಪ್ರದೇಶದಲ್ಲಿ ವಾಸವಾಗಿದ್ದಾರೆ. ೨೦೦೧ ರ ಅಧ್ಯಯನದ ಪ್ರಕಾರ ಅತ್ಯಂತ ಕಡಿಮೆ ಮಟ್ಟದ (೭.೧೪%) ಜನಸಂಖ್ಯಾ ಏರಿಕೆ ಈ ಜಿಲ್ಲೆಯಲ್ಲಿದೆ. ತಾಲೂಕುವಾರು ಗಮನಿಸಿದಾಗ ಉಡುಪಿ ತಾಲ್ಲೂಕಿನಲ್ಲಿ ಅತ್ಯಂತ ಹೆಚ್ಚಿನ ೫.೨೬ ಲಕ್ಷದಷ್ಟು ಜನಸಂಖ್ಯೆಯಿದ್ದು, ಕುಂದಾಪುರದಲ್ಲಿ ೩.೭೭ ಲಕ್ಷ ಹಾಗೂ ಕಾರ್ಕಳದಲ್ಲಿ ೨.೦೬ ಲಕ್ಷದಷ್ಟು ಜನಸಂಖ್ಯೆಯಿದೆ. ವಿವಿಧ ಧರ್ಮದ ಆಧಾರದಲ್ಲಿ ಗಮನಿಸಿದಾಗ ೮೪% ದಷ್ಟು ಹಿಂದುಗಳೂ, ೧೧% ಮುಸ್ಲಿಂರೂ, ಹಾಗೂ ಶೇಕಡಾ ೪ ರಷ್ಟು ಕ್ರಿಶ್ಚಿಯನ್ನರು ಇದ್ದಾರೆ. ಜಿಲ್ಲೆಯಲ್ಲಿ ಅತ್ಯಂತ ಕಡಿಮೆ ಪ್ರಮಾಣದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿವೆ.

ಜಿಲ್ಲೆಯ ಆರ್ಥಿಕ ವ್ಯವಸ್ಥೆಯು ಕೃಷಿಯ ಮೇಲೆ ಅವಲಂಬಿತವಾಗಿದೆ. ಜಿಲ್ಲೆಯಲ್ಲಿ ಒಟ್ಟು ೧.೮೩ ಲಕ್ಷದಷ್ಟು ಕೃಷಿಕರಿದ್ದು, ಎರಡು ಹೆಕ್ಟೇರ್ ಗಳಿಗಿಂತ ಕಡಿಮೆ ಮಟ್ಟದ ಸಣ್ಣ ಹಾಗೂ ಮಧ್ಯಮ ಭೂ ಹಿಡುವಳಿದಾರರಿದ್ದಾರೆ. ಜಿಲ್ಲೆಯು ೯೮ ಕಿ.ಮೀ. ಉದ್ದದ ಕರಾವಳಿ ತೀರವನ್ನು ಹೊಂದಿರುವುದರಿಂದ ಉಡುಪಿ ಹಾಗೂ ಕುಂದಾಪುರ ತಾಲೂಕುಗಳಲ್ಲಿ ಹೆಚ್ಚಿನ ಜನರು ಮೀನುಗಾರಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಜಿಲ್ಲೆಯಲ್ಲಿ ೧೩ ಬೃಹತ್ ಹಾಗೂ ಮಧ್ಯ ಪ್ರಮಾಣದ ಕೈಗಾರಿಕೆ ಉದ್ದಿಮೆಗಳಿವೆ. ಇವುಗಳಲ್ಲಿ ಸುಮಾರು ೪೫,೬೧೨ ಮಂದಿ ದುಡಿಯುತ್ತಿದ್ದಾರೆ. ರಾಜ್ಯದ ಎಲ್ಲಾ ಜಿಲ್ಲೆಗಳೊಂದಿಗೆ ಹೋಲಿಸಿದಾಗ ಉಡುಪಿ ಜಿಲ್ಲೆಯ ಒಟ್ಟು ನಿವ್ವಳ ಆದಾಯ (ಜಿ.ಡಿ.ಪಿ) ಪಟ್ಟಿಯಲ್ಲಿ ೧೭ನೇ ಸ್ಥಾನದಲ್ಲಿದ್ದು, ತಲಾ ಆದಾಯದಲ್ಲಿ ೫ನೇ ಸ್ಥಾನದಲ್ಲಿದೆ. ಇದು ಕಳೆದ ಹಲವು ವರ್ಷಗಳಿಂದ ಉಡುಪಿ ಜಿಲ್ಲೆಯು ಕಡಿಮೆ ಮಟ್ಟದ ಆರ್ಥಿಕ ಅಭಿವೃದ್ಧಿ ಹೊಂದುತ್ತಿರುವ ಜಿಲ್ಲೆ ಎಂದು ತಿಳಿಯಬಹುದಾಗಿದೆ.

**ಸಾಕ್ಷರತೆ ಪ್ರಮಾಣ:**

೨೦೦೧ನೇ ಜನಗಣತಿ ಪ್ರಕಾರ ಉಡುಪಿ ಜಿಲ್ಲೆಯ ಸಾಕ್ಷರತೆಯ ಪ್ರಮಾಣ ಶೇಕಡಾ ೮೧.೨೦. ಇದನ್ನು ರಾಜ್ಯಕ್ಕೆ ಹೋಲಿಸಿದಾಗ ಸಾಕ್ಷರತೆಯ ಪ್ರಮಾಣ ಶೇಕಡಾ ೬೬.೪೪. ಜಿಲ್ಲೆಯಲ್ಲಿ ಪುರುಷರ ಸಾಕ್ಷರತೆ ಪ್ರಮಾಣ ೮೮.೨೩%ವಾದರೆ ಮಹಿಳೆಯರ ಸಾಕ್ಷರತೆಯ ಪ್ರಮಾಣ ಶೇಕಡಾ ೭೫.೧೯. ಲಿಂಗಾಧಾರಿತ ಸಾಕ್ಷರತೆಯ ಅಸಮಾನತೆಯ ಪ್ರಮಾಣ ಶೇಕಡಾ ೧೪.೭೮ ರಷ್ಟಿದೆ. ದಕ್ಷಿಣ ಕನ್ನಡ ಜಿಲ್ಲೆಯ ನಂತರ ಅತ್ಯಂತ ಹೆಚ್ಚಿನ ಪ್ರಮಾಣದ ಸಾಕ್ಷರತೆಯನ್ನು ಹೊಂದಿರುವ ಜಿಲ್ಲೆ ಇದಾಗಿದೆ. ೧೯೯೧ ರಿಂದ ೨೦೦೧ ನೇ ಇಸವಿಯ ತನಕ ಶೇಕಡಾ ೯ ರಷ್ಟು ಸಾಕ್ಷರತೆಯ ಪ್ರಮಾಣದಲ್ಲಿ ಹೆಚ್ಚಳವಾಗಿದೆ. ಈ ಜಿಲ್ಲೆಯ ಗ್ರಾಮೀಣ ಭಾಗದಲ್ಲಿ ಸಾಕ್ಷರತೆಯ ಪ್ರಮಾಣ ಶೇಕಡಾ ೭೬.೩೫ ರಷ್ಟಿದ್ದು, ಅದೇ ರೀತಿ ಲಿಂಗಾಧಾರಿತ ಸಾಕ್ಷರತೆಯ ಅಸಮಾನತೆಯ ಪ್ರಮಾಣ ರಾಜ್ಯದಲ್ಲೇ ಕಡಿಮೆ ಎಂದರೆ ಶೇಕಡಾ ೧೧ ರಷ್ಟಿದೆ.

ೋಷ್ಟಕ ೩.೧.೧ ಉಡುಪಿ ಜಿಲ್ಲೆಯ ಸಾಕ್ಷರತೆಯ ವಿವರ.

| ೂಕು | ಗ್ರಾಮೀಣ | | | ನಗರ | | | ಒಟ್ಟು | | |
|---|---|---|---|---|---|---|---|---|---|
| | ಪುರುಷರು | ಮಹಿಳೆಯರು | ಒಟ್ಟು | ಪುರುಷರು | ಮಹಿಳೆಯರು | ಒಟ್ಟು | ಪುರುಷರು | ಮಹಿಳೆಯರು | ಒಟ್ಟು |
| ರ್ಕಳ | ೮೬.೦೭ | ೭೪.೯ | ೮೦.೪ | ೯೪.೧೩ | ೮೬.೩೩ | ೯೦.೩೨ | ೮೭.೧೫ | ೭೬.೨೭ | ೮೧.೩೧ |
| ಾಪುರ | ೮೩.೮೨ | ೬೭.೧೭ | ೪೭.೭೨ | ೯೨.೩೨ | ೮೧.೫೧ | ೮೬.೮೨ | ೮೪.೫೩ | ೬೮.೨೧ | ೭೫.೬೫ |
| ಡುಪಿ | ೮೯.೯೨ | ೭೭.೮೭ | ೮೩.೨೩ | ೯೪.೦೩ | ೮೫.೮೩ | ೮೯.೮೨ | ೯೧.೧೫ | ೭೯.೦೮ | ೮೫.೧೪ |
| ಿಲ್ಲೆ | ೮೬.೮೫ | ೭೨.೬೭ | ೭೬.೩೫ | ೯೩.೮೩ | ೮೫.೩೧ | ೮೯.೮೨ | ೮೮.೨೩ | ೭೫.೧೯ | ೮೧.೨೫ |
| ಾಜ್ಯ | ೭೦.೪೫ | ೪೮.೦೧ | ೫೬.೩೫ | ೮೬.೬೬ | ೭೪.೧೩ | ೮೦.೫೪ | ೭೧.೦೧ | ೫೬.೮೭ | ೬೬.೬೪ |

ಜಿಲ್ಲಾ ಮಾನವ ಅಭಿವೃದ್ಧಿ ಮಾಹಿತಿ, ಉಡುಪಿ ೨೦೦೮.

ಮೇಲ್ಕಂಡ ಅಂಕಿ ಅಂಶಗಳನ್ನು ಗಮನಿಸಿದಾಗ ಕುಂದಾಪುರ ತಾಲೂಕು ಅತೀ ಕಡಿಮೆ ಪ್ರಮಾಣದ ಸಾಕ್ಷರತೆಯನ್ನೂ, ಕಾರ್ಕಳ ತಾಲೂಕು ಶೇಕಡಾ ೮೧.೩೧ ಹಾಗೂ ಉಡುಪಿ ತಾಲೂಕು ಜಿಲ್ಲೆಯಲ್ಲಿ ಅತೀ ಹೆಚ್ಚಿನ (೮೫.೧೪%) ಸಾಕ್ಷರತೆಯನ್ನು ಹೊಂದಿದ ತಾಲೂಕಾಗಿದೆ. ತಾಲೂಕುವಾರು ಗ್ರಾಮೀಣ ಪ್ರದೇಶದ ಅಂಕಿ ಅಂಶಗಳನ್ನು ಗಮನಿಸಿದಾಗ ಕುಂದಾಪುರ ತಾಲೂಕಿನಲ್ಲಿ ಗ್ರಾಮೀಣ ಸಾಕ್ಷರತೆಯ ಪ್ರಮಾಣ ಶೇಕಡಾ ೭೪.೭೨ ಹಾಗೂ ಕಾರ್ಕಳ ತಾಲೂಕಿನ ನಗರ ಪ್ರದೇಶದ ಸಾಕ್ಷರತೆಯ ಪ್ರಮಾಣವು ಜಿಲ್ಲೆಯಲ್ಲೇ ಹೆಚ್ಚಿನ (೯೦.೨%) ಪ್ರಮಾಣದಲ್ಲಿದೆ. ಉಡುಪಿ ತಾಲೂಕಿನ ಗ್ರಾಮೀಣ ಪ್ರದೇಶದ ಸಾಕ್ಷರತೆಯ ಪ್ರಮಾಣ ಶೇಕಡಾ ೮೩.೨೩ ರಷ್ಟಿದ್ದರೆ, ನಗರ ಪ್ರದೇಶದ ಸಾಕ್ಷರತೆಯ ಪ್ರಮಾಣ ಶೇಕಡಾ ೮೯.೮೨.

ಉಡುಪಿ ಜಿಲ್ಲೆಯ ಮಾನವ ಅಭಿವೃದ್ಧಿ ಸೂಚಿ

೧೯೯೧ ರಲ್ಲಿ ಉಡುಪಿ ಜಿಲ್ಲೆಯ ಮಾನವ ಅಭಿವೃದ್ಧಿ ಸೂಚಿಯ ಕೃಪಾಂಕ ೦.೬೫೯ ಹಾಗೆಯೇ ೨೦೦೧ ರಲ್ಲಿ ಮಾನವ ಅಭಿವೃದ್ಧಿ ಸೂಚಿಯಲ್ಲಿ ಕೃಪಾಂಕ ೦.೭೧೪ನ್ನು ಪಡೆದು ರಾಜ್ಯದಲ್ಲಿ ಮೂರನೇ ಸ್ಥಾನವನ್ನು ಪಡೆದಿದೆ. ಪಂಚಾಯತ್ ರಾಜ್ ವ್ಯವಸ್ಥೆಯು ಉಡುಪಿಯಲ್ಲಿ ಉತ್ತಮವಾಗಿ ಕಾರ್ಯನಿರ್ವಹುಸುತ್ತಿವೆ. ಉಡುಪಿ ತಾಲ್ಲೂಕು ೬೧ ಗ್ರಾಮಪಂಚಾಯತ್‌ಗಳನ್ನು, ಕುಂದಾಪುರ ೫೦ ಹಾಗೂ ಕಾರ್ಕಳ ತಾಲ್ಲೂಕು ೨೯ ಗ್ರಾಮ ಪಂಚಾಯತ್ಗಳನ್ನು ಒಳಗೊಂಡಿದೆ. ಇವಿಷ್ಟೂ ಉಡುಪಿ ಜಲ್ಲೆಯ ಒಂದು ಪಕ್ಷಿ ನೋಟ. ಇನ್ನೂ ಅಧ್ಯಯನಕ್ಕಾಗಿ ಆಯ್ಕೆ ಮಾಡಲಾದ ಉಡುಪಿ ಜಿಲ್ಲೆಯಲ್ಲಿರುವ ಮಕ್ಕಳ ಹಕ್ಕುಗಳ ಕಾನೂನುಬದ್ಧ ವ್ಯವಸ್ಥೆಗಳ ಬಗ್ಗೆ ತಿಳಿದು ಕೊಳ್ಳೋಣ.

**ಉಡುಪಿ ಜಿಲ್ಲೆಯಲ್ಲಿರುವ ಮಕ್ಕಳ ಹಕ್ಕುಗಳ ಕಾನೂನುಬದ್ಧ ವ್ಯವಸ್ಥೆಗಳು:**

೨೦೧೦ ರಲ್ಲಿ ಹೊರಬಂದ ಕಾಯಿದೆ ಮಕ್ಕಳ ಪೋಷಣೆ, ರಕ್ಷಣೆ ಮತ್ತು ಮಕ್ಕಳ ನ್ಯಾಯ ಕುರಿತು ಪುನರ್ವಸತಿ ಕುರಿತು ಹೊಸತೊಂದು ದೃಷ್ಟಿಕೋನವನ್ನೇ ಬೆಳೆಸಲಾರಂಭಿಸಿತು. ಇದರಲ್ಲಿನ ಬಹಳ ಮುಖ್ಯವಾದ ವಿಚಾರ ವಿಶ್ವ ಸಂಸ್ಥೆಯ ಮಕ್ಕಳ ಹಕ್ಕುಗಳ ಒಡಂಬಡಿಕೆಯಲ್ಲಿ ಸೂಚಿಸಿರುವಂತೆ ' ಮಕ್ಕಳೆಂದರೆ ೧೮

ವರ್ಷದೊಳಗಿನವರು ' ಎಂದು ಸ್ಪಷ್ಟ ಮಾಡಿರುವುದು . ಹೀಗಾಗಿ ಮಕ್ಕಳ ಪೋಷಣೆ, ರಕ್ಷಣೆ ಮತ್ತು ಮಕ್ಕಳ ತಪ್ಪುಗಳನ್ನು ಕುರಿತು ಪೊಲೀಸ್, ನ್ಯಾಯಾಲಯ, ಮಾಧ್ಯಮವೇ ಮೊದಲಾದವರು ತೆಗೆದುಕೊಳ್ಳುತ್ತಿದ್ದ ನಿಲುವು, ನಿರ್ಧಾರ, ಯೋಜನೆ, ಯೋಜನೆಗಳಲ್ಲಿ ಬದಲಾವಣೆ ಬಂದಿದೆ. ಅದರೂ ಈ ಕಾಯಿದೆ ಇಡೀ ದೇಶದಲ್ಲಿ ಇನ್ನೂ ಸಮರ್ಪಕವಾಗಿ ಜಾರಿಯಾಗಿಲ್ಲ ಎಂಬುದು ವಾಸ್ತವ. ೨೦೧೦ ರ ಜನವರಿ ೨೨ ರಂದು ಮಾನ್ಯ ನ್ಯಾಯಾಧೀಶರುಗಳಾದ ದಲ್ವೀರ್ ಭಂಡಾರಿ ಮತ್ತು ಎ.ಕೆ. ಪಟ್ನಾಯಕ್ ಅವರಿದ್ದ ಸರ್ವೋಚ್ಚ ನ್ಯಾಯಾಲಯ ಪೀಠವು ಹೊರಡಿಸಿರುವ ನಿರ್ದೇಶನದಂತೆ ಎಲ್ಲಾ ರಾಜ್ಯಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳು ತಮ್ಮ ಜಿಲ್ಲೆಗಳಲ್ಲಿ ಜಿಲ್ಲಾ ಮಕ್ಕಳ ಕಲ್ಯಾಣ ಸಮಿತಿಗಳು, ಜಿಲ್ಲಾ ಮಕ್ಕಳ ನ್ಯಾಯ ಮಂಡಳಿಗಳು ಮತ್ತು ಮಕ್ಕಳ ವಿಶೇಷ ಪೊಲೀಸ್ ಘಟಕಗಳನ್ನು ಸ್ಥಾಪಿಸಬೇಕು. ರಾಜ್ಯದ ಎಲ್ಲ ಕಡೆ ಮಕ್ಕಳಿಗಾಗಿ ಸಹಾಯವಾಣೀಗಳನ್ನು (ಚೈಲ್ಡ್‌ಲೈನ್ ಉಚಿತ ದೂರವಾಗಿ ಸಂಖ್ಯೆ ೧೦೯೮) ಸ್ಥಾಪಿಸಬೇಕು. ಈ ಎಲ್ಲಾ ವ್ಯವಸ್ಥೆಗಳು ಸಮರ್ಪಕವಾಗಿ ನಡೆಸಲೆಂದೇ ನಮ್ಮ ರಾಷ್ಟ್ರದಲ್ಲಿ ಸಮಗ್ರ ಮಕ್ಕಳ ರಕ್ಷಣಾ ಯೋಜನೆ ' ಎನ್ನುವುದನ್ನು ೨೦೧೦ ರಿಂದ ಜಾರಿ ಮಾಡಲಾಗಿದೆ.

ಜಿಲ್ಲಾ ಮಕ್ಕಳ ಕಲ್ಯಾಣ ಸಮಿತಿಗಳು, ಜಿಲ್ಲಾ ನ್ಯಾಯ ಮಂಡಳಿಗಳು, ಚೈಲ್ಡ್‌ಲೈನ್ ಮತ್ತು ಮಕ್ಕಳ ವಿಶೇಷ ಪೊಲೀಸ್ ಘಟಕಗಳು ಮಕ್ಕಳ ತಕ್ಷಣೆಗಾಗಿ ಇರುವ ವ್ಯವಸ್ಥೆಗಳು. ಮಕ್ಕಳ ನ್ಯಾಯ (ಮಕ್ಕಳ ಪೋಷಣೆ ಮತ್ತು ರಕ್ಷಣೆ) ಕಾಯಿದೆ ೨೦೦೦ ಮತ್ತು ಅದಕ್ಕೆ ೨೦೦೬ ರಲ್ಲಿ ಆದ ತಿದ್ದುಪಡಿಯಂತೆ ಎಲ್ಲಾ ಜಿಲ್ಲೆಗಳಲ್ಲಿ ಎಲ್ಲ ಮಕ್ಕಳ ಸುರಕ್ಷತೆಗಾಗಿ ಮಾಡುವ ವ್ಯವಸ್ಥೆಗಳೇ ಇದಾಗಿದೆ. ಇವುಗಳನ್ನು ಸ್ಥಾಪಿಸಿ ನಿರ್ವಹಿಸುವುದು ರಾಜ್ಯ ಸರಕಾರದ ಜವಾಬ್ದಾರಿ.

**ಮಕ್ಕಳ ಕಲ್ಯಾಣ ಸಮಿತಿ ( ಸಿ.ಡಬ್ಲ್ಯೂಸಿ.):**

ಪ್ರಸ್ತುತ ಉಡುಪಿ ಜಿಲ್ಲೆಯ ನಿಟ್ಟೂರಿನ ಬಾಲಕಿಯರ ಬಾಲ ಮಂದಿರದಲ್ಲಿ ಉಡುಪಿ ಜಿಲ್ಲಾ ಮಕ್ಕಳ ಕಲ್ಯಾಣ ಸಮಿತಿಯು ಕಾರ್ಯನಿರ್ವಹಿಸುತ್ತಿದೆ. ಪ್ರತಿ ಶನಿವಾರ ಮಧ್ಯಾಹ್ನ ೨.೩೦ ಕ್ಕೆ ಸಭೆ ಸೇರುತ್ತಾರೆ. ಪಾಲನೆ ಮತ್ತು ಪೋಷಣೆಯ ಅಗತ್ಯವಿರುವ ಮಕ್ಕಳನ್ನು ಇದರ ವ್ಯಾಪ್ತಿಗೆ ತರಲಾಗುತ್ತದೆ. ಹೀಗೆ ಸಿಕ್ಕಿ ಮಗುವನ್ನು ಸುರಕ್ಷೆಯಲ್ಲಿಡಲು "ಅರ್ಹ ಸಂಸ್ಥೆ" ಹಾಗೂ ದತ್ತು ಸ್ವೀಕಾರದ ಕೇಂದ್ರಗಳು ಇವೆ. ಈ ಕಾಯಿದೆಯ ಹಿನ್ನೆಲೆಯಲ್ಲಿ 'ಮಗು' ಎಂದ ಕೂಡಲೇ ಕಾನೂನಿನೆದುರು ಹಲವು ವಿಚಾರಗಳು ಎದ್ದು ಬರುತ್ತದೆ. ಮೊದಲನೆಯದು ೧೮ ವರ್ಷದೊಳಗಿನವರನ್ನು ಯಾವುದೇ ತೊಂದರೆ, ಕೋಟಲೆ, ಸಮಸ್ಯೆಗಳಿಗೆ ಈಡಾಗದಂತೆ ರಕ್ಷಿಸುವುದು ಸರ್ಕಾರದ ಕರ್ತವ್ಯ ಅವರ ಮೇಲೆ ಯಾವುದೇ ಶೋಷಣೆಯಾಗದಂತೆ ತಡೆಯಬೇಕು. ಮಕ್ಕಳು ದುಡಿಯುವಂತಾಗಬಾರದು, ಭಿಕ್ಷೆ ಬೇಡುವಂತಾಗದಾರದು, ಅನಾಥರಾಗಬಾರದು. ದಿಕ್ಕು ದೆಸೆಯಿಲ್ಲದಂತೆ ಅಲೆಯುವಂತಾಗಲಾರರು. ಬಡತನದ ಕಾರಣದಿಂದ ಶಿಕ್ಷಣ ವಂಚಿತರಾಗಲಾರದು ಮತ್ತು ಅವಸ್ಯಕತೆ ಬಿದ್ದರೆ ಸರ್ಕಾರದಿಂದ ಪ್ರಾಯೋಜನೆಯ ಧನ ಸಹಾಯವನ್ನು ಪಡೆಯಬೇಕು. ಇತ್ಯಾದಿ ಮಕ್ಕಳನ್ನು ತೊಂದರೆಗಳಿಂದ ರಕ್ಷಿಸಿ ಪೋಷಿಸಿ, ಅವರ ಕುಟುಂಬಗಳಿಗೆ ಮತ್ತೆ ಸೇರಿಸಿ ಪುನರ್ವಸತಿಗೆ ಏರ್ಪಾಡುಗಳನ್ನು ಸರ್ಕಾರ ಮಾಡಬೇಕು. ಇಂತಹ ವ್ಯವಸ್ಥೆಗಳಲ್ಲಿ ಏನು ಮಾಡಬೇಕು ಹೇಗೆ ಮಾಡಬೇಕು ಎಂದು ನಿರ್ದೇಶಿಸುವ ಅಧಿಕಾರ ಹೊಂದಿರುವುದು

ಶಾಸನಾತ್ಮಕವಾಗಿ ಸೇಮಿಸಲ್ಪಟ್ಟಂತಹ ಜಿಲ್ಲಾ ಮಕ್ಕಳ ಕಲ್ಯಾಣ ಸಮಿತಿಗಳು ಮಕ್ಕಳ ನ್ಯಾಯ ಕಾಯಿದೆಯ ಸೆಕ್ಷನ್ ೨೯ ರಂತೆ ಒಬ್ಬ ಅಧ್ಯಕ್ಷರು ಮತ್ತು ನಾಲ್ಕು ಸದಸ್ಯರಿರುವ ಈ ಪೀಠದಲ್ಲಿ ಕನಿಷ್ಠ ಒಬ್ಬರಾದರೂ ಮಹಿಳೆ ಇರಬೇಕು ಮತ್ತು ಇನ್ನೊಬ್ಬರು ಮಕ್ಕಳ ವಿಚಾರಗಳನ್ನು ಕರುತ ಸುರಿತ ವ್ಯಕ್ತಿಯಾಗಿರಬೇಕು. ಮಕ್ಕಳ ಕಲ್ಯಾಣ ಸಮಿತಿಯ ನ್ಯಾಯಾಧೀಶರ ಪೀಠದಂತೆ ಮಹಾನಗರ ನ್ಯಾಯಾಧೀಶರು (ಮೆಟ್ರೋಪಾಲಿಟನ್ ನ್ಯಾಯಾಧೀಶರು) ಅಥವಾ ಆಯಾ ಸಂದರ್ಭಕ್ಕೆ ತಕ್ಕಂತೆ ಮೊದಲ ದರ್ಜೆಯ ನ್ಯಾಯಾಧೀಶರಂತೆ ಕಾರ್ಯ ನಿರ್ವಹಿಸುತ್ತದೆ.

**ಮಕ್ಕಳ ನ್ಯಾಯ ಮಂಡಳಿ (ಜೆ. ಜೆ. ಬಿ.):**

ಪ್ರಸ್ತುತ ಉಡುಪಿ ಜಿಲ್ಲೆಯಲ್ಲಿ ಉಡುಪಿ ಜಿಲ್ಲಾ ಮಕ್ಕಳ ನ್ಯಾಯ ಮಂಡಳಿಯು ಸರ್ಕಾರಿ ವೀಕ್ಷಣಾಲಯ, ಮನೋಗುಳಜ್ಜ, ದೊಡ್ಡಣ್ಣಗುಡ್ಡೆಯಲ್ಲಿ ಕಾರ್ಯನಿರ್ವಹಿಸುತ್ತಿದೆ. ಕಾನೂನಿನೊಡನೆ ಸಂಘರ್ಷದಲ್ಲಿರುವ ಮಕ್ಕಳನ್ನು ಸ್ವೀಕರಿಸುವ ಮತ್ತು ಆ ಮಕ್ಕಳೊಂದಿಗೆ ವಿಚಾರಣೆ ನಡೆಸಿ ಮಕ್ಕಳಿಗೆ ಬೇಕಾದ ರಕ್ಷಣೆ, ಸಮಾಲೋಚನೆಗಳಿಗೆ ನೆರವಾಗುವ ವ್ಯವಸ್ಥೆಯಿದಾಗಿದೆ. ೧೮ ವರ್ಷದೊಳಗಿನವರು ಮಕ್ಕಳು ಎಂದು ಗುರುತಿಸದ ಮೇಲೆ, ಮಕ್ಕಳು ಮಾಡಿರಬಹುದಾದ ತಪ್ಪುಗಳನ್ನು ಗಂಭೀರವಾದ ಅಪರಾಧಗಳು ಎಂದು ಪರಿಗಣಿಸದೆ ಅವರ ಮನಃ ಪರಿವರ್ತನೆಗಾಗಿ, ಪುನರ್ವಸತಿಗಾಗಿ ಏರ್ಪಾಡುಗಳನ್ನು ಸರ್ಕಾರ ಮಾಡಬೇಕು. ಏನು ಮಾಡಬೇಕು, ಹೇಗೆ ಮಾಡಬೇಕು ಎಂದು ನಿರ್ದೇಶನ ನೀಡುವ ಜವಾಬ್ದಾರಿಯನ್ನು ಕಾಯಿದೆ ಜಿಲ್ಲಾ ಮಕ್ಕಳ ನ್ಯಾಯ ಮಂಡಳಿಗಳಿಗೆ ನೀಡಿದೆ. ಕಾಯಿದೆಯ ಸೆಕ್ಷನ್ ೪ ರಂತೆ ಒಬ್ಬ ಮೆಟ್ರೋಪಾಲಿಟನ್ ದಂಡಾಧಿಕಾರಿಗಳು ಅಥವಾ ಪ್ರಥಮ ವರ್ಗದ ನ್ಯಾಯಿಕ ದಂಡಾಧಿಕಾರಿಗಳು ಮತ್ತು ಕನಿಷ್ಠ ಒಬ್ಬ ಮಹಿಳೆಯನ್ನೊಳಗೊಂಡ ಇಬ್ಬರು ಸಮಾಜ ಕಾರ್ಯಕರ್ತರನ್ನೊಳಗೊಂಡ ಒಂದು ಪೀಠದಂತೆ ಈ ಮಂಡಳಿ ಕೆಲಸ ನಿರ್ವಹಿಸುತ್ತದೆ. ಮಕ್ಕಳ ಮನೋವಿಜ್ಞಾನ ಅಥವಾ ಮಕ್ಕಳ ಕಲ್ಯಾಣ ಕ್ಷೇತ್ರದಲ್ಲಿ ಕನಿಷ್ಠ ಏಳು ವರ್ಷಗಳ ಅನುಭವ ಇಲ್ಲದ ಯಾವುದೇ ಸಮಾಜ ಕಾರ್ಯಕರ್ತರನ್ನು ಮಂಡಳಿಗೆ ನೇಮಿಸುವಂತಿಲ್ಲ. ಮಕ್ಕಳು ಏನಾದರೂ ಕಾನೂನು ಬಾಹಿರವಾದ ತಪ್ಪುಗಳನ್ನು ಮಾಡದರೆ ಅಂತಹ ಮಕ್ಕನ್ನು ಮಕ್ಕಳ ವಿಶೇಷ ಪೊಲೀಸ್ ಘಟಕಗಳು ವಿಚಾರಣೆ ಮಾಡಿ ಮಕ್ಕಳ ನ್ಯಾಯ ಮಂಡಳಿಯದುರು ಹಾಜರು ಪಡಿಸಬೇಕು. ಅಂತಹ ಸಂದರ್ಭದಲ್ಲಿ ಮಕ್ಕಳ ಪೋಷಕರಿಗೆ ಅದಷ್ಟೊ ಬೇಗ ತಿಳಿಸಿರಬೇಕು ಮತ್ತು ಅವಶ್ಯಕತೆ ಇದ್ದಲ್ಲಿ, ಮಕ್ಕಳಿಗೂ ವಕೀಲರನ್ನು ನೇಮಿಸಿಕೊಳ್ಳುವ ಅವಕಾಶ ಕೊಡಲೇಬೇಕು. ಬಹಳ ಪ್ರಮುಖವಾದ ವಿಚಾರ, ಹೀಗೆ ನ್ಯಾಯ ಮಂಡಳಿಯೆದುರು ಬರುವ ಮಕ್ಕಳಿಗೆ ಜಾಮೀನು ಪಡೆಯುವ ಹಕ್ಕು ಇದೆ. ಈ ಮಂಡಳಿಯ ಉದ್ದೇಶ ಮಕ್ಕಳಿಗೆ ಶಿಕ್ಷೆ ನೀಡುವುದಲ್ಲ ಬದಲಿಗೆ ಅವರಿಗೆ ಸಲಹಾ ಸಮಾಲೋಚನೆಗಳನ್ನು ನಡೆಸಿ ಪುನರ್ವಸತಿ ವ್ಯವಸ್ಥೆಗಳನ್ನು ಕಲ್ಪಿಸುವುದಾಗಿದೆ. ಬಹಳ ಮುಖ್ಯವಾದ ಇನ್ನೊಂದು ವಿಚಾರ . ಕಾನೂನು ಬಾಹಿರ ಕೃತ್ಯಗಳನ್ನು ಮಾಡಿದ ಯಾವುದೇ ೧೮ ವರ್ಷದೊಳಗಿನ ಮಕ್ಕಳನ್ನು ಬಂಧೀಖಾನೆಯಲ್ಲಿ ಕೂಡಿಹಾಕುವಂತಿಲ್ಲ ರಾತ್ರಿಗಳಲ್ಲಿ ಪೊಲೀಸ್ ಠಾಣೆಯಲ್ಲಿ ಇರಿಸಿಕೊಳ್ಳುವಂತಿಲ್ಲ ಮತ್ತು ಕೈಗಳಿಗೆ ಕೋಳಿ ಹಾಕುವಂತಿಲ್ಲ. ಇಂತಹ ಪ್ರಕರಣಗಳ ಬಗ್ಗೆ ಮಾಧ್ಯಮಗಳಲಿ–ಪತ್ರಿಕೆ ದೂರದರ್ಶನದಲ್ಲಿ ಮಕ್ಕಳ ಹೆಸರು, ಶಾಲೆ, ಪೋಷಕರ ವಿಚರಗಳನ್ನು ಮತ್ತು ಛಾಯಾ ಚಿತ್ರವನ್ನು ಪ್ರಕಟಿಸುವಂತಿಲ್ಲ.

**ಮಕ್ಕಳ ವಿಶೇಷ ಪೊಲೀಸ್ ಘಟಕ (ಎಸ್. ಜೆ. ಪಿ. ಯೂ.):**

ರಾಜ್ಯ ಸರಕಾರದ ಆದೇಶದಂತೆ ಎಲ್ಲಾ ಜಿಲ್ಲೆಗಳಲ್ಲಿರುವಂತೆ ಪ್ರಸ್ತುತ ಉಡುಪಿ ಜಿಲ್ಲೆಯಲ್ಲಿಯೂ ಕೂಡ ಈ ವ್ಯವಸ್ಥೆಯಿದ್ದು ಕಾರ್ಯನಿರ್ವಹಿಸುತ್ತಿವೆ. ಮಕ್ಕಳ ನ್ಯಾಯ ಕಾಯಿದೆಯ ಜಾರಿಗೆ ಸಮರ್ಥವಾಗಿ ನೆರುವ ನೀಡಲೆಂದೇ ಪ್ರತಿಯೊಂದು ಜಿಲ್ಲೆಯಲ್ಲೂ ಮಕ್ಕಳ ವಿಶೇ ಪೊಲೀಸ್ ಘಟಕಗಳನ್ನು ಸ್ಥಾಪಿಸಲಾಗಿದೆ. ಈ ಕಾಯಿದೆಯ ಸೆಕ್ಷನ್ ೬೩ ರಂತೆ ಪೊಲೀಸ್ ಠಾಣೆಗಳ ಪರವಾಗಿ ಮಕ್ಕಳೊಡನೆ ಯಾರು ವ್ಯವಹರಿಸುತ್ತಾರೋ ಅಥವಾ ಮಕ್ಕಳು ಕಾನೂನುಬಾಹಿರ ಕೃತ್ಯಗಳಲ್ಲಿ ತೊಡಗದಂತೆ ತಡೆಯುವ ಕೆಲಸದಲ್ಲಿ ಜವಾಬ್ದಾರಿಯನ್ನು ಹೊಂದಿರುತ್ತಾರೆ. ಅವರು ತಮ್ಮ ಜವಾಬ್ದಾರಿಗಳನ್ನು ಸಮರ್ಪಕವಾಗಿ ಮತ್ತು ಪರಿಣಾಮಕಾರಿಯಾಗಿ ನಿರ್ವಹಿಸಲು ನೆರವಾಗಲು ಅವರಿಗೆ ಸೂಕ್ತವಾದ ತರಬೇತಿ ಮತ್ತು ನಿರ್ದೇಶನಗಳನ್ನು ' ಮಕ್ಕಳ ರಕ್ಷಣಾ ' ಘಟಕಗಳ ಮೂಲಕ ನೀಡಲಾಗುತ್ತಿದೆ. ಮಕ್ಕಳು ಮತ್ತು ಮಕ್ಕಳ ಹಕ್ಕುಗಳ ಸೂಕ್ತವಾದ ತರಬೇತಿ ಹೊಂದಿರುವ ಕಳಕಳಿ ತೋರಿಸುವ ಹಾಗೂ ತರಬೇತಿ ಪಡೆದುಕೊಂಡಿರುವ ಕನಿಷ್ಠ ಒಬ್ಬರು ಪೊಲೀಸರನ್ನು 'ಮಕ್ಕಳ ಕಲ್ಯಾಣಾಧಿಕಾರಿ' ಎಂದು ಗುರುತಿಸಿ ಪ್ರತಿ ಪೊಲೀಸ್ ಠಾಣೆಯಲ್ಲಿ ನೇಮಿಸಲಾಗಿದೆ. ಇಂತಹ ನಿರ್ದಿಷ್ಟ ಪೊಲೀಸರೆ ಮಕ್ಕಳು ಮತ್ತು ಮಕ್ಕಳ ವಿಚಾರಗಳ ಬಗ್ಗೆ ಇತರ ಪೊಲೀಸರೊಂದಿಗೆ ಸಂಸರ್ಗ ಹೊಂದಿರಬೇಕು. ವಿವಿಧ ಪೊಲೀಸ್ ಠಾಣೆಗಳಲ್ಲಿ ನಿಯೋಜಿತರಾದ ಇಂತಹ ಮಕ್ಕಳ ಕಲ್ಯಾಣಾಧಿಕಾರಿ ಪೊಲೀಸರೆಲ್ಲಾ ಸೇರಿ, ಜಿಲ್ಲಾ / ನಗರ ಮಕ್ಕಳ ವಿಶೇಷ ಪೊಲೀಸ್ ಘಟಕ ಮಾಡಿಕೊಳ್ಳುತ್ತಾರೆ.

ಈ ಮೇಲೆ ವಿವರಿಸಲಾಗಿರುವ ಮೂರು ವ್ಯವಸ್ಥೆಗಳ ಉದ್ದೇಶ ಅನಾಥ ಮಕ್ಕಳಾಗಲಿ, ತಿರಸ್ಕೃತರಾದ, ಪರಿತ್ಯಕ್ತರಾದ, ಕಳೆದುಹೋದ, ಓಡಿಹೋದ, ವಿವಿಧ ರೀತಿಯ ಶೋಷಣೆಗೆ ಒಳಗಾದ ಅಥವಾ ಕಾನೂನಿನೊಡನೆ ಸಂಘರ್ಷದಲ್ಲಿರುವ ಮಕ್ಕಳಾಗಲೀ ಎಲ್ಲರಿಗೂ ಕಾಲ ವಿಳಂಬವಾಗದೆ ಪ್ರಕರಣ ವರದಿಯಾದ ನಾಲ್ಕು ತಿಂಗಳೊಳಗೇ ನ್ಯಾಯ ಒದಗಿಸುವ ಕೆಲಸವನ್ನು ಸಮರ್ಥವಾಗಿ ನಿರ್ವಹಿಸಲು ಆಗಬೇಕೆಂಬುದು. ಮಕ್ಕಳ ಕಲ್ಯಾಣ ಸಮಿತಿಗಳು ಮತ್ತು ಮಕ್ಕಳ ನ್ಯಾಯ ಮಂಡಳಿಗಳೆದುರು ಬರುವ ಮಕ್ಕಳಿಗೆ ಸೂಕ್ತವಾದ ತಾತ್ಕಾಲಿಕವಾದ ರಕ್ಷಣೆ ನೀಡುವ ಉದ್ದೇಶದಿಂದಲೇ ಪ್ರತಿ ಜಿಲ್ಲೆಯಲ್ಲೂ ಮಕ್ಕಳ ಪರಿವೀಕ್ಷಣಾಲಯಗಳು, ವಿಶೇಷ ನಿಲಯಗಳು, ಮಕ್ಕಳ ನಿಲಯಗಳು, ಶಿಶು ಮಂದಿರಗಳನ್ನು ಬಾಲಕಿಯರಿಗೆ ಮತ್ತು ಬಾಲಕರಿಗೆ ಪ್ರತ್ಯೇಕವಾಗಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಮೂಲಕ ನಿಯೋಜಿಸಲಾಗಿದೆ.

**ಚೈಲ್ಡ್ ಲೈನ್ ೧೦೯೮:**

ಪ್ರಸ್ತುತ ಉಡುಪಿ ಜಿಲ್ಲೆಯಲ್ಲಿ ಈ ವ್ಯವಸ್ಥೆಯಿಲ್ಲ. ಪ್ರಸ್ತುತ ಈ ಸಂಖ್ಯೆಗೆ ಉಡುಪಿ ನಗರ ವ್ಯಾಪ್ತಿಯಿಂದ ಕರೆ ಮಾಡಿದರೆ ಎಸ್.ಪಿ. ಕಛೇರಿಗೆ ಕರೆ ಹೋಗುತ್ತದೆ. ಕೇಳಿದರೆ ಯಾವುದೇ ಸಂಘ ಸಂಸ್ಥೆ ಇದನ್ನು ನಡೆಸಲು ಮುಂದೆಬಂದಿರವುದಿಲ್ಲ. ಈ ವ್ಯವಸ್ಥೆಯ ಪರಿಕಲ್ಪನೆಯನ್ನು ಇಲ್ಲಿ ವಿವರಿಸಲಾಗಿದೆ. ತೊಂದರೆಗೆ ಈಡಾಗಿರುವ ಮಕ್ಕಳು ತಾವೇ ಅಥವಾ ತೊಂದರೆಗೀಡಾಗಿರುವ ಮಕ್ಕಳಿಗೆ ಸಹಾಯ ಅಪೇಕ್ಷಿಸಿ ಯಾರು ಬೇಕಾದರೂ (ಮಕ್ಕಳು, ವಯಸ್ಕರು) ಮಾಹಿತಿ ನೀಡುವ ಮತ್ತು ಮಾಹಿತಿ ಪಡೆಯಲು ಇರುವ ವ್ಯವಸ್ಥೆ ಚೈಲ್ಡ್ ಲೈನ್ ೧೦೯೮

ಗೆ ಉಚಿತವಾಗಿ ದೂರವಾಣಿ ಕರೆ ಮಾಡಿದಜಾಗ ಅಲ್ಲಿ ಕಾರ್ಯ ನಿರ್ವಹಿಸುವ ತರಗಬೇತಿ ಪಡೆದ ಸಿಬ್ಬಂದಿ ಮಾಹಿತಿ ಪಡೆದು ತೊಂದರೆಯಲ್ಲಿರುವ ಮಕ್ಕಳನ್ನು ರಕ್ಷಿಸಲು ಇತರ ವ್ಯವಸ್ಥೆಗಳ (ಪೋಲೀಸ್, ಕಾರ್ಮಿಕ ಇಲಾಖೆ, ವೈದ್ಯರು, ಸವಯಂ ಸೇವಕರು, ಇತ್ಯಾದಿ) ಸಹಾಯದೊಂದಿಗೆ ಧಾವಿಸುತ್ತಾರೆ. ಮಕ್ಕಳನ್ನು ರಕಷಿಸಿ, ಆಯಾ ಸಂದರ್ಭಕ್ಕೆ ತಕ್ಕಂತೆ ಪೊಲೀಸ್ ದೂರು ನೀಡುವುದು, ಕಾರ್ಮಿಕ ಇಲಾಖೆಯ ನ್ಯಾಯಾಲಯಕ್ಕೆ ಸೂಕ್ತ ಕಾನೂನುಗಳಡಿ ದೂರು ನೀಡಿ, ಮಕ್ಕಳ ಕಲ್ಯಾಣ ಸಮಿತಿಗೆ ಹಾಜರು ಪಡಿಸಿ ಮಕ್ಕಳ ಪೋಷಕರನ್ನು ಪತ್ತೆ ಮಾಡುವುದೇ ಮೊದಲಾದ ಕೆಲಸಗಳನ್ನು ಚೈಲ್ಡ್‌ಲೈನ್ ಮಾಡುತ್ತಿದೆ. ಅವಸ್ಯಕತೆ ಬಿದ್ದಲ್ಲಿ ಸೂಕ್ತ ಸಂಸ್ಥೆಗಳ ಆಶ್ರಯದಲ್ಲಿ ಮಕ್ಕಳನ್ನು ಮಕ್ಕಳ ಕಲ್ಯಾಣ ಸಮಿತಿಯ ಸೂಚನೆಯಂತೆ ಕಾನೂನಿನ ಪ್ರಕಾರ ಇರಿಸಿ ಅನುಸರಣೆ ಮಾಡುತ್ತದೆ.

ಚೈಲ್ಡ್‌ಲೈನ್ ಪ್ರತಿನಿಧಿಗಳು ಶಾಲೆ, ವಿದ್ಯಾರ್ಥಿ ನಿಲಯಗಳು. ಮಕ್ಕಳ ನಿಲಯಗಳಿಗೂ ಬೇಟಿ ನೀಡಿ ಮಕ್ಕಳೊಂದಿಗೆ ಕಾರ್ಯಾಗಾರಗಳನ್ನು ನಡೆಸಿ ಮಕ್ಕಳ ಹಕ್ಕುಗಳು ಮತ್ತು ಮಕ್ಕಳ ರಕ್ಷಣೆ ಕುರಿತು ಮಾಡಿತಿ ನೀಡುತ್ತಾರೆ. ಬಾಲಕಾರ್ಮಿಕರಿರುವುದು, ಮಕ್ಕಳು ಶಾಲೆ ಬಿಟ್ಟಿರುವುದು, ಮಕ್ಕಳನ್ನು ಅಪಹರಿಸುವುದು, ದುರ್ವ್ಯವಹಾರಗಳಿಗೆ, ಮಾರಕ ವಸ್ತುಗಳ ಸೇವನೆಗೆ ಮಕ್ಕಳನ್ನು ಪ್ರಚೋದಿಸುವುದು ಮತ್ತು ಮಕ್ಕಳಿಗೆ ಮದುವೆ ಮಾಡುವಂತಹ ಪ್ರಕರಣಗಳು. ಮಕ್ಕಳಿಗೆ ಹೊಡೆತ , ಹಿಂಸೆ, ತೊಂದರೆ ಕೊಡುವುದು, ಬೀದಿಯಲ್ಲಿ ಕದಿಯುವ, ಮಕ್ಕಳು ದಾರಿ ತಪ್ಪಿರುವ ಮಕ್ಕಳೇ ಮೊದಲಾದ ಪ್ರಕರಣಗಳನ್ನು ಚೈಲ್ಡ್‌ಲೈನ್‌ಗೆ ಯಾವು ಬೇಕಾದರೂ ಸಂಪರ್ಕಿಸಿ ಮಕ್ಕಳ ಹಿತದೃಷ್ಟಿಯಿಂದ ಮಾಹಿತಿ ನೀಡಬಹುದು. ಮಕ್ಕಳ ನ್ಯಾಯ ಕಾಯಿದೆಯಲ್ಲಿ ಮಕ್ಕಳನ್ನು ರಕ್ಷಿಸಲು ನಿಯೋಜಿತರಾಗಿರುವ ವ್ಯವಸ್ಥೆಗಳಲ್ಲಿ ಸ್ಪಷ್ಟವಾಗಿ ಹೆಸರಿಸಲಾಗಿರುವ ಚೈಲ್ಡ್‌ಲೈನ್ ಭಾರತ ಸರ್ಕಾರದ ಒಂದು ಅಧಿಕೃತ ಕಾರ್ಯಕ್ರಮವಾಗಿದೆ. ಕರ್ನಾಟಕ ರಾಜ್ಯದ ಎಂಟು ಜಿಲ್ಲೆಗಳಲ್ಲಿ ಚೈಲ್ಡ್ ಲೈನ್‌ಗಳು (ಉಚಿತ ದೂರವಾಗಿ – ೧೦೯೮) ಕಾರ್ಯನಿರ್ವಹಿಸುತ್ತಿದೆ. ಬೆಂಗಳೂರು, ದಾವಣಗೆರೆ, ಮೈಸೂರು, ಮಂಗಳೂರು, ಧಾರವಾಡ, ಶಿವಮೊಗ್ಗ ಬೀದರ್ ಮತ್ತು ಗುಲ್ಬರ್ಗಾ.

**ಮಕ್ಕಳ ಹಕ್ಕುಗಳ ರಕ್ಷಣಾ ಆಯೋಗ:**

ಇದು ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಒಂದೊಂದೆ ಇರುವುದು. ಈ ವ್ಯವಸ್ಥೆಯ ತಿಳುವಳಿಕೆ ಮತ್ತು ಅರಿವು ಉಡುಪಿ ಜಿಲ್ಲೆಯ ಜನರಲ್ಲಿದೆ? ಈ ವ್ಯವಸ್ಥೆಯ ಪರಿಕಲ್ಪನೆಯನ್ನು ಇಲ್ಲಿ ವಿವರಿಸಲಾಗಿದೆ. ಈ ಮಕ್ಕಳ ಹಕ್ಕುಗಳ ರಕ್ಷಣೆಗಾಗಿ ರಾಷ್ಟ್ರೀಯ ಆಯೋಗ ೨೦೦೭ ರಲ್ಲಿ ರಚನೆಯಾಗಿ ಕಾರ್ಯ ನಿರ್ವಹಿಸುತ್ತಿದೆ. ಈ ರಾಷ್ಟ್ರೀಯ ಆಯೋಗಕ್ಕೆ ಅಧ್ಯಕ್ಷರಾಗಿ ಡಾ / ಶಾಂತಾ ಸಿನ್ಹಾ ಅವರನ್ನು ಮತ್ತು ಇತರ ಆರು ಜನರನ್ನು ಸದಸ್ಯರನ್ನಾಗಿ ಕೇಂದ್ರ ಸರ್ಕಾರ ನೇಮಿಸಿದೆ. ರಾಷ್ಟ್ರೀಯ ಆಯೋಗದ ಕಚೇರಿ ನವದೆಹಲಿಯಲ್ಲಿದೆ. ಕರ್ನಾಟಕದಲ್ಲೂ ರಾಜ್ಯ ಮಕ್ಕಳ ಹಕ್ಕುಗಳ ಆಯೋಗದ ರನೆಯಾಗಿ ೨೦೦೯ ರ ಜುಲೈ ತಿಂಗಳಿಂದ ಕಾರ್ಯ ನಿರ್ವಹಿಸುತ್ತದೆ. ರಾಜ್ಯದ ಈ ಆಯೋಗಕ್ಕೆ ಅಧ್ಯಕ್ಷರಾಗಿ ಶ್ರೀಮತಿ ನೀನಾ ನಾಯಕ್ ಮತ್ತು ಸದಸ್ಯರನ್ನಾಗಿ ಶ್ರೀ ವಾಸುದೇವ ಶರ್ಮಾ, ಕು. ಮಮತಾ ಡಾ. ನಿರಂಜನ್, ಶ್ರೀ ಪ್ರಮೋದ್ ಕುಲಕರ್ಣಿ ಮತ್ತು ಡಾ. ಮಧು (೨೦೦೯ ರಿಂದ ಮೂರು

ವರ್ಷಗಳ ತನಕ) ಇವರುಗಳನ್ನು ರಾಜ್ಯ ಸರ್ಕಾರ ನೇಮಿಸಿದೆ. ಮಕ್ಕಳ ಹಕ್ಕುಗಳನ್ನು ಕಾಪಾಡಲು ಪ್ರತ್ಯೇಕವಾದ ಇಲಾಖೆ ಇರಬೇಕು. ಮಕ್ಕಳಿಗಾಗಿ ಪ್ರತ್ಯೇಕವಾದ ನ್ಯಾಯಾಲಯ ಬೇಕು. ಮಕ್ಕಳಿಗಾಗಿ ಪ್ರತ್ಯೇಕವಾದ ಆಯೋಗವಿರಬೇಕು ಎನ್ನುವ ಎಷ್ಟೋ ದಿನಗಳ ಕೂಗಿಗೆ ಈಗ ಚೈತನ್ಯ ಬಂದಿದೆ.

ಮಕ್ಕಳೆಂದರೆ ೧೮ ವರ್ಷದೊಳಗಿನವರು ಎಂಬುದನ್ನು ಸಾರ್ವತ್ರೀಕರಿಸುವದರಲ್ಲಿ ಆಯೋಗ ಮುಂದಾಗುತ್ತಿದೆ. ಮಕ್ಕಳಿಗೆ ಸಂಬಂಧಿಸಿದ ಎಲ್ಲಾ ವಿಚಾರಗಳನ್ನು ಕುರಿತು ಆಯೋಗ ತುರ್ತಿನ ದೃಷ್ಠಿಯಿಂದ ನೋಡುತ್ತಿದೆ. ಎಲ್ಲ ಮಕ್ಕಳು ಎಲ್ಲ ಹಕ್ಕುಗಳನ್ನು ಹೊಂದಬೇಕು. ಅದರಲ್ಲೂ ಸಂಕಷ್ಟಕ್ಕೀಡಾಗಬಲ್ಲ ಅಪಾಯದಲ್ಲಿರುವ ಮಕ್ಕಳಿಗೆ ನೈಜ ಕಾಳಜಿ ತೋರಬೇಕು. ಎನ್ನುವುದರ ಬಗ್ಗೆ ಆಯೋಗ ವಿಶೇಷ ಗಮನ ಹರಿಸುತ್ತಿದೆ. ಇದರೊಂದಿಗೆ ತೊಂದರೆಯಲ್ಲಿರಬಹುದಾದ ವಿವಿಧ ಭೌಗೋಲಿಕ ಪ್ರದೇಶಗಳು ಪರಿಸ್ಥಿತಿಗಳಲ್ಲಿರುವ ಮಕ್ಕಳ ಹಕ್ಕುಗಳತ್ತಲೂ ಆಯೋಗ ಗಮನ ಹರಿಸುತ್ತಿದೆ. ಸಮುದಾಯಗಳಲ್ಲಿ ಹಕ್ಕುಗಳ ನಿರಾಕರಣೆ ಯಾವ ಮಗುವಿಗೂ ಆಗದಂತೆ ಆಯೋಗ ರಕ್ಷಿಸಬೇಕು. ಎಲ್ಲ ರೀತಿ ನಿಯಮ, ಕಾನೂನು, ಕಾರ್ಯಕ್ರಮ, ಯೋಜನೆಗಳ ಮಕ್ಕಳ ಪರವಾಗಿರುವಂತೆ ಆಯೋಗ ಕಣ್ಗಾವಲು ಮಾಡುತ್ತದೆ. ಪ್ರತಿಯೊಂಬ ನಿರ್ಧಾರ, ಯೋಜನೆ ಎಲ್ಲಾವು ಮಕ್ಕಳ ಹಿತದೃಷ್ಠಿಯಿಂದಲೇ ಆಗಬೇಕೆನ್ನುವ ಸಂದೇಶವನ್ನು ಮಕ್ಕಳ ಹಕ್ಕುಗಳ ರಕ್ಷಣೆಗಾಗಿ ರಾಜ್ಯ ಮತ್ತು ರಾಷ್ಟ್ರ ಆಯೋಗಗಳು ಮುಂದಿಟ್ರಟು ಕೊಂಡಿದೆ.

ನಾವೆಷ್ಟೇ ಹಕ್ಕುಗಳನ್ನು ಮಕ್ಕಳಿಗೆ ಕೊಡಮಾಡಿಸಬೇಕು. ರಕ್ಷಿಸಬೇಕು ಎಂದು ಹೇಳಿದರೂ ನಿರ್ದಿಷ್ಟ ಸಮುದಾಯಗಳು, ಗುಂಪುಗಳಿಂದ ಮಕ್ಕಳು ಹೊರಬಿದ್ದು ಸಹಜವಾಗಿ ಅವರಿಗೆ ಸಿಗಬೇಕಾದ ಹಕ್ಕುಗಳಿಂದ ವಂಚಿತರಾಗಿರುತ್ತಾರೆ. ಇದಕ್ಕೆ ಕಾರಣ ಎಲ್ಲೆಡೆಯೂ ಮಕ್ಕಳ ಹಕ್ಕುಗಳ ಬಗ್ಗೆ ಅರಿವಿಲ್ಲದಿರುವುದು ಅಥವಾ ಹಕ್ಕುಗಳನ್ನು ನಿರಾಕರಿಸುವ ಮತ್ತು ಉಲ್ಲಂಘಿಸುವ ಸ್ವಭಾವವನ್ನು ಸ್ವಾಭಾವಿಕವೆಂದೇ ಬಹುಜನರು ಭಾವಿಸುವುದು ಮಕ್ಕಳ ಹಕ್ಕುಗಳ ಪರವಾದ ದನಿ ಗಟ್ಟಿಯಾಗಬೇಕೆಂದರೆ ಮತ್ತು ಮಕ್ಕಳಿಗೆ ಹಾಗೂ ಮಕ್ಕಳ ಪರವಾಗಿರುವವರಿಗೆ ಸ್ಥೈರ್ಯ ಬರಬೇಕೆಂದರೆ ತೊಂದರೆಯಲ್ಲಿರುವ ಮಕ್ಕಳ ಬಗ್ಗೆ ಮತ್ತು ತೊಂದರೆ ನೀಡುತ್ತಿರುವವರ ಬಗ್ಗೆ ಸಾರ್ವಜನಿಕವಾಗಿ, ಬಹಿರಂಗವಾಗಿ ಮಾತನಾಡುವ ಮತ್ತು ಮಕ್ಕಳ ಹಕ್ಕುಗಳನ್ನು ಉಲ್ಲಂಘಿಸುವವರ ಮೇಲೆ ಕೈಗೊಳ್ಳಬಹುದಾದ ಕ್ರಮಗಳ ಬಗ್ಗೆ ಪ್ರತಿಯೊಬ್ಬರೂ ಮಾತನಾಡಬೇಕು. ಪ್ರಚಾರ ಮಾಡಬೇಕು.

ಮಕ್ಕಳಿಗೆ ಸಂಬಂಧಿಸಿದ ಹಕ್ಕುಗಳನ್ನು ಒಂದು ಮುಖ್ಯ ಇನ್ನೊಂದು ಈಗ ಪ್ರಮುಖವಲ್ಲ. ಇನ್ನಾವುದೋ ಹಕ್ಕು ಮುಂದೊಂದು ದಿನ ದೊರಕಿದರೆ ಪರವಾಗಿಲ್ಲ ಎಂಬ ಭಾವನೆ ಸಲ್ಲದು. ಎಲ್ಲ ಹಕ್ಕುಗಳು ಒಂದಕ್ಕೊಂದು ಸಂಬಂಧಿಸಿದ್ದು ಮತ್ತು ಆಧರಿಸಿದ್ದು, ಹೀಗಾಗಿ ಆಯೋಗವು ನಂಬುವುದು ಮಗು ಹುಟ್ಟಿದಂದಿನಿಂದ ಎಲ್ಲಾ ಹಕ್ಕುಗಳನ್ನು ಪಡೆಯುತ್ತಾ ಬೆಳೆದರೆ ಮಾತ್ರ ೧೮ ದಾಟಿದ ನಂತರವೂ ಹಕ್ಕುಗಳನ್ನು ಸಾಧಿಸುವ ಮತ್ತು ಕರ್ತವ್ಯಗಳನ್ನು ನಿರ್ವಹಿಸುವ ಯುವಕ ಯುವತಿಯಾರಾಗಬಹುದು ಎಂದು.

## ಆಯೋಗ ರಚನೆ ಮತ್ತು ಕಾರ್ಯಗಳು:

ಮಕ್ಕಳ ಹಕ್ಕುಗಳ ರಕ್ಷಣಾ ಆಯೋಗದ ಕಾಯಿದೆಯ ಅಧ್ಯಾಯ ೩ರ ಸೆಕ್ಷನ್ ೧೩, ರಲ್ಲಿ ಆಯೋಗದ ಕೆಲಸಗಳೂ ಯಾವುವು ಎಂದು ವಿವರಿಸಲಾಗಿದೆ.

೧. ಮಕ್ಕಳ ರಕ್ಷಣೆಗಾಗಿ ಸದ್ಯ ಚಾಲ್ತಿಯಲ್ಲಿರುವ ಎಲ್ಲ ಕಾಯಿದೆ, ಕಾನೂನುಗಳನ್ನು ವಿಮರ್ಷಿಸಿ ಜಾರಿ ಮಾಡುವಲ್ಲಿ ಕ್ರಮುಗಳನ್ನು ಕೈಗೊಳ್ಳುವುದು.

೨. ಮಕ್ಕಳನ್ನು ರಕ್ಷಿಸುವಲ್ಲಿ ತೆಗೆದುಕೊಂಡಿರುವ ಕ್ರಮಗಳನ್ನು ರಾಜ್ಯ ಸರ್ಕಾರ, ಕೇಂದ್ರ ಸರ್ಕಾರಕ್ಕೆ ಕಾಲಕಾಲಕ್ಕೆ (ವಾರ್ಷಿಕ) ವರದಿಯನ್ನು ಆಯೋಗಗಳು, ನೀಡಬೇಕು.

೩. ಮಕ್ಕಳ ಹಕ್ಕುಗಳ ಉಲ್ಲಂಘನೆಯ ಪ್ರಕರಣಗಳನ್ನು ತನಿಖೆ ಮಾಡಿ ಕ್ರಮ ಕೈಗೊಳ್ಳಲು ಸಂಬಂಧಿಸಿದವರಿಗೆ ಶಿಫಾರಾಸು ಮಾಡುವುದು.

೪. ಭಯೋತ್ಪಾದನೆ, ಕೋಮುಗಲಭೆಗಳು, ದೊಂಬಿ, ನೈಸರ್ಗಿಕ ವಿಕೋಪಗಳು, ಕೌಟುಂಬಿಕ ದೌರ್ಜನ್ಯ ಹೆಚ್.ಐ.ವಿ/ಎಡ್ಸ್, ಸಾಗಣೆ ಮಾರಾಟ, ಅಪೌಷ್ಠಿಕತೆ, ಹಿಂಸೆ , ಶೋಷಣೆ, ವ್ಯಾಪಾರಿ ಲೈಂಗಿಕ ಶೋಷಣೆ, ಲೈಂಗಿಕ ಚಿತ್ರ ಇತ್ಯಾದಿಗಳಿಗೆ ಬಲಿಯಾಗಿರುವ ಮಕ್ಕಳ ಪರಿಸ್ಥಿತಿಯನ್ನು ಪರಿಶೀಲಿಸಿ , ವಿಶ್ಲೇಷಿಸಿ, ಸೂಕ್ತ ಕ್ರಮಗಳನ್ನು ಕೈಗೊಳ್ಳಲು ಶಿಫಾರಸು ಮಾಡುವುದು.

೫. ವಿಶೇಷ ರಕ್ಷಣೆ, ತೊಂದರೆ, ಮೂಳೆ ಗುಂಪಾಗಿರುವ ಮತ್ತು ಅವಕಾಶರಹಿತರಾದ ಮಕ್ಕಳು, ಕಾನೂನಿನೊಡನೆ, ಸಂಘರ್ಷದಲ್ಲಿರುವ ಮತ್ತು ಪೋಷಣೆ ಮತ್ತು ರಕ್ಷಣೆಯ ಅವಸ್ಯಕತೆಯಿರುವ, ಕೌಟುಂಬಿಕ ರಕ್ಷಣೆಯಿಲ್ಲದ ಮತ್ತು ಬಂಧಿಖಾನೆಯ ನಿವಾಸಿಗಳ ಮಕ್ಕಳ ಪರಿಸ್ಥಿತಿಗಳ ಬಗ್ಗೆ ಪರಿಶೀಲಿಸಿ ಸೂಕ್ತ ಕ್ರಮ ಕೈಗೊಳ್ಳಲು ಶಿಫಾರಸು ಮಾಡುವುದು.

೬. ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದ ಒಪ್ಪಂದಗಳು, ಒಡಂಬಡಿಕೆಗಳು, ಯೋಜನೆಗಳನ್ನು ಕಾಲಕಾಲಕ್ಕೆ ಅಧ್ಯಯನ ಮಾಡಿ ಪರಿಶೀಲಿಸಿ ಮಕ್ಕಳ ಹಿತ ದೃಷ್ಠಿಯಿಂದ ಸೂಕ್ತ ಸಲಹೆಗಳನ್ನು ನೀಡುವುದು.

೭. ಮಕ್ಕಳ ಹಕ್ಕುಗಳ ಕ್ಷೇತ್ರದಲ್ಲಿ ಸಂಶೋಧನೆಗಳನ್ನು ಕೈಗೊಳ್ಳುವುದನ್ನು ಉತ್ತೇಜಿಸುವುದು.

೮. ಮಕ್ಕಳ ಹಕ್ಕುಗಳನ್ನು ಕುರಿತು ಸಮಾಜದ ವಿವಿಧ ಅಂಗಗಳ ಜನ ಸಮುದಾಯಗಳಿಗೆ ಮಕ್ಕಳ ಹಕ್ಕುಗಳನ್ನು ಕುರಿತು ಅರಿವು ಮೂಡಿಸಿ ಮಕ್ಕಳ ಹಕ್ಕುಗಳ ರಕ್ಷಣೆಗೆ ಕೈಗೊಳ್ಳಬೇಕಾದ ಕ್ರಮಗಳನ್ನು ಕುರಿತು ವಿಸ್ತೃತವಾದ ಪ್ರಚಾರವನ್ನು ಪ್ರಕಟನೆಗಳು, ಚರ್ಚೆ, ಕಾರ್ಯಾಗಾರಗಳು, ವಿಚಾರ ಸಂಕೀರಣಗಳು ಮತ್ತು ತರಬೇತಿಗಳೇ ಮೊದಲಾದವುಗಳ ಮೂಲಕ ನಡೆಸುವುದು.

೯. ರಾಜ್ಯ ಕೇಂದ್ರ ಸರ್ಕಾರ ಅಥವಾ ಯಾವುದೇ ಇನ್ನಿತರ ಸಂಸ್ಥೆಗಳು ಮಕ್ಕಳನ್ನು ಇರಿಸಲು, ರಕ್ಷಿಸಲು , ಕಾದಿರಡಲು, ಚಿಕಿತ್ಸೆ ನೀಡಲು, ಮನಃ ಪರಿವರ್ತನೆ ಮಾಡಲು ನಡೆಸುವ ಯಾವುದೆ ನಿಲಯ, ಮಂದಿರ, ಇತ್ಯಾದಿಗಳನ್ನು ಪರಿಶೀಲಿಸುವ ಅವಶ್ಯಕತೆ ಇದೆ ಎಂದೆನಿಸಿದರೆ ಅವುಗಳನ್ನು ಖುದ್ದಾಗಿ ಪರಿಶೀಲಿಸಲು ಅಥವಾ ಪರಿಶೀಲಿಸಲು, ನಿರ್ದೇಶಿಸುವ ಅಧಿಕಾರವನ್ನು ಆಯೋಗ ಹೊಂದಿರುತ್ತದೆ.

೧೦. ಆಯೋಗಕ್ಕೆ ಬರುವ ದೂರುಗಳನ್ನು ಸ್ವೀಕರಿಸಿ ಪರಿಶೀಲಿಸುವುದೇ ಅಲ್ಲದೆ ಸ್ವಯಂ ಆಗಿ ತನ್ನ ಗಮನಕ್ಕೆ ಬರುವ ಪ್ರಕರಣಗಳನ್ನು ತೆಗೆದುಕೊಂಡು ಆಯೋಗವು ಪರಿಶೀಲಸುತ್ತದೆ.

ಇದರೊಂದಿಗೆ ಮಕ್ಕಳ ಹಕ್ಕುಗಳ ರಕ್ಷಣಾ ಆಯೋಗಕ್ಕಿರುವ ಇನ್ನೊಂದು ಪ್ರಮುಖ ಜವಾಬ್ದಾರಿ ೨೦೦೯ ರಲ್ಲಿ ಜಾರಿಗೆ ಬಂದ ಮಕ್ಕಳ ಉಚಿತ ಮತ್ತು ಕಡ್ಡಾಯ ಶಿಕ್ಷಣದ ಹಕ್ಕಿನ ಕಾಯಿದೆಯ ಜಾರಿಯಲ್ಲಿ ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಉಸ್ತುವಾರಿ ಮಾಡುವುದು. ಉಳಿದೆಲ್ಲ ಕೆಲಸಗಳಂತೆಯೇ ಶಿಕ್ಷಣದ ಹಕ್ಕಿನ ಜಾರಿಯಲ್ಲಿ ಉಲ್ಲಂಘನೆ, ಲೋಪ ಅದಲ್ಲಿ ಈ ಕುರಿತು ಆಯೋಗಕ್ಕೆ ಯಾರು ಬೇಕಾದರೂ ದೂರು ನೀಡಬಹುದು.

**ಆಯೋಗಕ್ಕಿರುವ ಅಧಿಕಾರಗಳು:**

ತನ್ನೆದುರು ಬರುವ ಅಥವಾ ತಾನೇ ಕೈಗೆತ್ತಿಕೊಳ್ಳುವ ಯಾವುದೇ ಪ್ರಕರಣವನ್ನು ಕುರಿತು ಆಯೋಗವು ಸಿವಿಲ್ ನ್ಯಾಯಾಲಯದಂತೆ ಕಾರ್ಯ ನಿರ್ವಹಿಸಲು ಅಧಿಕಾರ ಹೊಂದಿದೆ.

ದೇಶ / ರಾಜ್ಯದ ಯಾವುದೇ ಭಾಗದಿಂದ ಸಂಬಂಧಿತ ವ್ಯಕ್ತ / ಗುಂಪುಗಳನ್ನು ಹಾಜರಾಗಲು ಆದೇಸಿಸಿ ಅವರು ಪ್ರಮಣ ಸ್ವೀಕರಿಸಿ ಹೇಳಿಕೆ ನೀಡಲು ಮತ್ತು ಅದನ್ನು ದಾಖಲಿಸುವ ಅಧಿಕಾರ.

ಯಾವುದೇ ಪ್ರಕರಣಕ್ಕೆ ಸಂಬಂಧಿಸಿದಂತೆ ಅವಶ್ಯಕತೆ ಇರುವ ಎಲ್ಲ ರೀತಿಯ ದಾಖಲೆಗಳನ್ನು ಹುಡುಕಿಸುವ ಮತ್ತು ಪರಿಶೀಲಿಸುವ ಅಧಿಕಾರ.

೧. ಅಫಿಡವಿಟ್ / ಸ್ವಯಂ ಘೋಷಣಾ ಪತ್ರದ ಮೂಲಕ ಸಾಕ್ಷಿಯನ್ನು ಪಡೆಯುವುದು.

೨. ಯಾವುದೇ ನ್ಯಾಯಾಲಯದ ಕಚೇರಿಯಿಂದ ಯಾವುದೇ ರೀತಿಯ ಸಾರ್ವಜನಿಕ ದಾಖಲೆಗಳನ್ನು ಅಥವಾ ಅವುಗಳ ಪ್ರತಿಗಳನ್ನು ಪಡೆಯಬಹುದು.

೩. ಸಾಕ್ಷಿಗಳನ್ನು ಅಥವಾ ಸಾಕ್ಷಿ ದಾಖಲೆಗಳನ್ನು ಪರಿಶೀಲಿಸಲು ವ್ಯಕ್ತಿಗಳನ್ನು ನೇಮಿಸುವುದು.

೪. ಯಾವುದೇ ಪ್ರಕರಣವನ್ನು ಪರಿಶೀಲಿಸಿದ ನಂತರ ಅದಕ್ಕೆ ಸಂಬಂಧಿಸಿದ / ಭೌಗೋಲಿಕ ಪ್ರದೇಶಗಳಿಗೆ ನಿಯುಕ್ತರಾಗಿರುವ ನ್ಯಾಯಾಧೀಶರಿಗೆ ಪ್ರಕರಣಗಳನ್ನು ಕೈಗೆತ್ತಿಗೊಳ್ಳಲು ವರ್ಗಾಯಿಸುವುದು

೫. ಯಾವುದೇ ಪ್ರಕರಣವನ್ನು ಕುರಿತು ಪರಿಶೀಸಿದ ನಂತರ ಆಯೋಗಕ್ಕೆ ಈ ಮುಂದಿನಂತೆ ಮಾಡುವ ಅಧಿಕಾರವಿರುತ್ತದೆ.

* ಪ್ರಕರಣದ ತನಿಖೆ ಸಂದರ್ಭದಲ್ಲಿ ಮಕ್ಕಳ ಹಕ್ಕುಗಳ ಉಲ್ಲಂಘನೆಯಾಗಿರುವ ಅಥವಾ ವಂಚನೆಯಾಗಿರುವುದು ಕಂಡು ಬಂದಲ್ಲಿ, ಆಯಾ ಸಂಬಂಧಿಸಿದ ಸರ್ಕಾರಕ್ಕೆ ಆಯಾ ನಿರ್ದಿಷ್ಠ ವ್ಯಕ್ತಿ / ಸಮೂಹ / ಇಲಾಖೆಯ ಮೇಲೆ ಸೂಕ್ತ ಕ್ರಮ ಕೈಗೊಳ್ಳಲು ಶಿಫಾರಸು ಮಾಡುವುದು. ಪ್ರಕರಣವನ್ನು ಉಚ್ಚ ನ್ಯಾಯಾಲಯ ಅಥವಾ ಸರ್ವೋಚ್ಚ ನ್ಯಲಾಯಾಲಯಕ್ಕೆ ಒಯ್ಯಬಹುದು ಮತ್ತು ಯಾವುದು ಸೂಕ್ತ ವೆನಿಸುತ್ತದೋ ಅಂತಹ ತೀರ್ಮಾನವನ್ನು ಕೈಗೊಳ್ಳಬೇಕೆಂದು ಕೇಳಿಕೊಳ್ಳುವುದು.

* ಯಾವ ಮಗುವಿಗೆ ಅಥವ ಮಕ್ಕಳ ಸಮೂಹಕ್ಕೆ ಯಾವ ಕ್ರಮ / ಪ್ರಕ್ರಿಯೆ / ತಪ್ಪು ನಿರ್ಧಾರಗಳು, ನಿರಾಕರಣೆಯೇ ಮೊದಲಾದವುಗಳಿಂದ ತೊಂದರೆ ಆಗಿರುತ್ತದೋ ಅಂತಹ ಪ್ರಕರಣಗಳ ವಿಚಾರಣೆಯ

ನಂತರ ಸರ್ಕಾರವು ಈ ವ್ಯಕ್ತಿಗೆ ಅಥಾವ ವ್ಯಕ್ತಿಯ ಕುಟುಂಬಕ್ಕೆ ಸೂಕ್ತವಾದ ರೀತಿಯಲ್ಲಿ ಪರಿಹಾರವನ್ನು ಕೊಡಿಸುವುದು.

* ಮಕ್ಕಳ ಕಷ್ಟದ ಪರಿಸ್ಥಿತಿಗಳನ್ನು ತಪ್ಪಿಸಿ ಮಕ್ಕಳ ಕಲ್ಯಾಣಕ್ಕಾಗಿ ಎಂದೇ ರೂಪಿಸಲಾಗಿರುವ ನೀತಿ, ನಿಯಮ, ಕಾನೂನುಗಳ ಜಾರಿಗೆ ನೀಡಿದ ನಿರ್ದೇಶನಗಳು, ಯೋಜನೆಗಳೂ ಅಥವಾ ನಿರ್ಣಯಗಳನ್ನು ಜಾರಿ ಮಾಡದಿರುವ ಸೂಕ್ತವಾಗಿ ನಿರ್ವಹಿಸದಿರುವ ಪ್ರಕರಣಗಳ ಬಗ್ಗೆ ಆಯೋಗ ಸ್ವಯಂ ಆಗಿ ಪರಿಶೀಲನೆ ನಡೆಸಿ ಕ್ರಮ ಕೈಗೊಳ್ಳಲು ಸೂಚಿಸಬಹುದು.

**ಆಯೋಗಕ್ಕೆ ದೂರು ಹೇಗೆ ಕೊಡುವುದು:**

೧. ಭಾರತದ ಯಾವುದೇ ಭಾಷೆಯಲ್ಲಿ (ಅಂದರೆ ೮ನೇ ಶೆಡ್ಯೂಲ್‌ನಲ್ಲಿರುವ ಭಾಷೆಗಳಿಂದ ಆಯೋಗಕ್ಕೆ ದೂರು ಸಲ್ಲಿಸಬಹುದು.

೨. ಹೀಗೆ ದೂರು ನೀಡಲು ಯಲಾವುದೇ ಶುಲ್ಕವನ್ನು ನೀಡಬೇಕಾದಿಲ್ಲ.

೩. ದೂರಿನಲ್ಲಿ ಸ್ಪಷ್ಟವಾಗಿ ವಿಚಾರವನ್ನು ನಮೂದಿಸಿರಬೇಕು. ಕೇವಲ ಸೂಚನೆಗಳಿಗೆ ಅವಕಾಶವಿರುವುದಿಲ್ಲ.

೪. ದೂರು ನೀಡುವವರಿಂದ ಅವಶ್ಯಕತೆ ಬಿದ್ದಲ್ಲಿ ಹೆಚ್ಚಿನ ಮಾಹಿತಿಯನ್ನು ಆಯೋಗ ಕೇಳಬಹುದು ಒಮ್ಮೊಮ್ಮೆ ಅನಾಮಿಕ ದೂರುಗಳಿಗೂ ಅವಕಾಶ ನೀಡಲೇಬೇಕಾಗುತ್ತದೆ.

**ದೂರು ನೀಡಬೇಕಾದ ಈ ಮುಂದಿನವುಗಳನ್ನು ಗಮನಿಸಬೇಕು:**

೧. ದೂರು ಸ್ಪಷ್ಟವಾಗಿರಬೇಕು.

೨. ನಿಜವಾದ ದೂರುಗಳಾಗಿರಬೇಕು. ತೀರಾ ನಿಕೃಷ್ಟವಾದ ಮತ್ತು ಸ್ಥಳೀಯವಾಗಿ ಪರಿಹರಿಸಬಹುದಾದ ದೂರುಗಳನ್ನು ನೀಡಬೇಡಿ.

೩. ಆಸ್ತಿ ಕರಾರು ಇತ್ಯಾದಿಗಳಿಗೆ ಸೇರಿದ ಸಿವಿಲ್ ಮೊಕದ್ದಮೆಗಳು ತೆಗೆದುಕೊಳ್ಳುವುದಿಲ್ಲ.

೪. ಕೆಲಸ ಮತ್ತು ಆ ಸಂಬಂಧಿತ ದೂರುಗಳಿಗೆ ಅವಕಾಶವಿಲ್ಲ.

೫. ಬೇರಾವುದೇ ಆಯೋಗ, ನ್ಯಾಯಾಲಯದ ಮುಂದಿರುವ ಪ್ರಕರಣಗಳು ಪರಿಗಣಿಸಲಾಗುವುದಿಲ್ಲ.
ಈಗಾಗಲೇ ಬೇರೆ ಆಯೋಗಗಳಿಂದ ನಿರ್ಧರಿಸಲ್ಪಟ್ಟಂತಹ ಪ್ರಕರಣಗಳನ್ನು ನೋಡುವುದಿಲ್ಲ.

೬. ಈಗಾಗಲೇ ಬೇರೆ ಆಯೋಗಗಳಿಂದ ನಿರ್ಧರಿಸಲ್ಪಟ್ಟಂತಹ ಪ್ರಕರಣಗಳನ್ನು ನೋಡುವುದಿಲ್ಲ.

೭. ಆಯೋಗದ ಅಡಿಯಲ್ಲಿ ಬರದಿರಬಹುದಾದ ಪ್ರಕರಣಗಳನ್ನು ನೋಡುವುದಿಲ್ಲ .

**ಪರಿವೀಕ್ಷಣಾಲಯಗಳು:**

ಕಾನೂನಿನೊಡನೆ ಸಂಘರ್ಷದಲ್ಲಿರುವ ಮಕ್ಕಳನ್ನು ಸ್ವೀಕರಿಸುವ ಮತ್ತು ಆ ಮಕ್ಕಳೊಂದಿಗೆ ವಿಚಾರಣೆ ನಡೆಸಿ ಮಕ್ಕಳಿಗೆ ಬೇಕಾದ ರಕ್ಷಣೆ, ಸಮಾಲೋಚನೆಗಳಿಗೆ ನೆರವಾಗುವ ಕೇಂದ್ರಗಳು. ಸಾಮಾನ್ಯವಾಗಿ ಇವೇ ಸ್ಥಳಗಳಲ್ಲಿ ಆಯಾ ಜಿಲ್ಲೆಯ/ಜಿಲ್ಲಾ ಸಮೂಹಗಳ ಮಕ್ಕಳ ನ್ಯಾಯ ಮಂಡಲಿಗಳು ಕಾರ್ಯನಿರ್ವಹಿಸುತ್ತವೆ. ಪ್ರಸ್ತುತ ಉಡುಪಿ ಜಿಲ್ಲೆಯಲ್ಲಿ ಮನೋಗುಳಜ್ಜೆ, ದೊಡ್ಡಣ್ಣಗುಡ್ಡೆಯಲ್ಲಿದೆ.

**ಾಲ ಮಂದಿರ:**

ಆರು ವರ್ಷದೊಳಗಿನ ಅನಾಥ ಮಕ್ಕಳು ಮತ್ತು ಹೆತ್ತವರಿಂದ ತೊರೆಯಲ್ಪಟ್ಟ ಮಕ್ಕಳನ್ನು ರಕ್ಷಿಸಿ ಈ ಗೃಹದಲ್ಲಿ ಇರಿಸಲಾಗುತ್ತದೆ. ಅಂಥ ಮಕ್ಕಳ ಪೋಷಕರು ಬಂದಲ್ಲಿ, ಪತ್ತೆಯಾದಲ್ಲಿ ಮಕ್ಕಳನ್ನು ಅವರವರ ಪೋಷಕರ ಸುಪರ್ದಿಗೆ ನೀಡಲಾಗುತ್ತದೆ. ಈಗಿನ ಹೊಸ ನಿರ್ದೇಶನದಂತೆ ಈ ಶಿಶುಮಂದಿರಗಳೂ ಸಹ ಮಕ್ಕಳನ್ನು ದತ್ತು ನೀಡುವ ಪ್ರಕ್ರಿಯೆಯಲ್ಲಿ ತೊಡಗಬಹುದು. ದತ್ತು ನೀಡುವಾಗಿನ ಎಲ್ಲ ನಿಯಮಗಳನ್ನು ಇವರು ಸಹ ಪಾಲಿಸಬೇಕು. ಪ್ರಸ್ತುತ ಉಡುಪಿ ಜಿಲ್ಲೆಯಲ್ಲಿ ಈ ವ್ಯವಸ್ಥೆಯಿದೆ. ಉಡುಪಿ ಜಿಲ್ಲೆಯಲ್ಲಿನ "ಅರ್ಹತಾ ಸಂಸ್ಥೆ"ಯೆಂದು ಗುರುತಿಸಿಕೊಂಡ ಸರಕಾರೇತರ ಸಂಘ ಸಂಸ್ಥೆಗಳಾದ ಸ್ಫೂರ್ತಿಧಾಮ ಕೆದೂರು, ನಮ್ಮ ಭೂಮಿ, ಶ್ರೀ ಕೃಷ್ಣ ಟ್ರಸ್ಟ್ ಮುಂತಾದವುಗಳು ಪಾಲನೆ ಮತ್ತು ಪೋಷಣೆಯ ಅಗ್ಯವಿರುವ ೦-೬ ಹಾಗೂ ೭-೧೮ ವರ್ಷದ ಮಕ್ಕಳನ್ನು ವಶಕ್ಕೆ ತೆಗೆದುಕೊಳ್ಳುವ ಮತ್ತು ದತ್ತು ನೀಡುವ ಪ್ರಕ್ರಿಯೆಯಲ್ಲಿ ತೊಡಗಿದೆ.

**ಬಾಲಕಿಯರ ಬಾಲಮಂದಿರ:**

ಇದು ಪೋಷಕರ ರಕ್ಷಣೆಯಿಲ್ಲದ ಮತ್ತು ಪೋಷಣೆ ರಕ್ಷಣೆಗಳ ಅವಶ್ಯಕತೆ ಇರುವ ಬಾಲಕಿಯರನ್ನು ಸರ್ಕಾರದ ವಶದಲ್ಲಿ ಇರಿಸುವ ವ್ಯವಸ್ಥೆ. ಇಲ್ಲಿ ಮಕ್ಕಳಿಗೆ ರಕ್ಷಣೆಯೊಂದಿಗೆ, ಆರೋಗ್ಯ ಸೇವೆ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೂ ಅವಕಾಶಗಳನ್ನು ನೀಡಲಾಗಿದೆ. ಇಲ್ಲಿ ಕಲಿತ ಎಷ್ಟೋ ಮಕ್ಕಳು ತಮ್ಮ ಮುಂದಿನ ವಿದ್ಯಾಭ್ಯಾಸಕ್ಕಾಗಿ ಸಂಸ್ಥೆಯ ಹೊರಗಿನ ಶಾಲೆ, ಕಾಲೇಜುಗಳಿಗೂ ಸಹ ಹೋಗುತ್ತಾರೆ. ಇವು ಅನಾಥಾಲಯಗಳಲ್ಲ ಎಂಬುವುದನ್ನು ತಿಳಿಯಬೇಕು. ಪ್ರಸ್ತುತ ಉಡುಪಿಯಲ್ಲಿ ಈ ವ್ಯವಸ್ಥೆಯಿದೆ.

**ಬಾಲಕರ ಬಾಲಮಂದಿರ:**

ಪೋಷಣೆ ಮತ್ತು ರಕ್ಷಣೆಯ ಅವಶ್ಯಕತೆಯಿರುವ ೬ ರಿಂದ ೧೨ ವರ್ಷದೊಳಗಿನ ಗಂಡು ಮಕ್ಕಳು ಇರುವ ಸ್ಥಳ ಬಾಲಕರ ಬಾಲ ಮಂದಿರಗಳು. ಸಾಮಾನ್ಯವಾಗಿ ಎಲ್ಲ ಜಿಲ್ಲೆಗಳಲ್ಲಿರುವ ಈ ಮಂದಿರಗಳಲ್ಲಿ ಶಿಕ್ಷಣ ಮತ್ತು ಮನೋವಿಕಾಸಕ್ಕೆ ಸೌಲಭ್ಯಗಳಿವೆ. ಆದರೆ ಬೆಂಗಳೂರಿನ ಬಾಲಮಂದಿರದಲ್ಲಿ ೬-೧೮ ವರ್ಷದ ಮಕ್ಕಳಲ್ಲದೆ ೧೮ ವರ್ಷ ದಾಟಿದವರಿಗಾಗಿ ಇರುವ ಪುರುಷರ ಅನುಪಾಲನ ಗೃಹವನ್ನೂ ಸೇರಿಸಿರುವುದು ಸಾಕಷ್ಟು ತೊಂದರೆಗಳಿಗೂ ಕಾರಣವಾಗುತ್ತಿದೆ. ಇಂತಹ ವಿಚಾರಗಳ ಬಗ್ಗೆ ಸರಕಾರ ಗಂಭೀರವಾಗಿ ಯೋಚಿಸಬೇಕಿದೆ. ಬಾಲಮಂದಿರಗಳು ಕೇವಲ ತಾತ್ಕಾಲಿಕ ಪೋಷಣೆ ಮತ್ತು ರಕ್ಷಣಾ ವ್ಯವಸ್ಥೆಗಳು. ಇಲ್ಲಿ ಮಕ್ಕಳನ್ನು ಶಾಶ್ವತವಾಗಿ ಬಿಡುವಂತಿಲ್ಲ ಮತ್ತು ಇವು ಮಕ್ಕಳ ಅನಾಥಾಲಯ ಅಥವಾ ಸರಕಾರಿ ವಿದ್ಯಾರ್ಥಿ ನಿಲಯಗಳಲ್ಲ.

- ಮಕ್ಕಳ ಪಾಲನೆ ಪೋಷಣೆಯ ಮೊದಲ ಕರ್ತವ್ಯ ಮತ್ತು ಹಕ್ಕು ಇರುವುದು ಆಯಾ ಮಕ್ಕಳ ಪೋಷಕರದ್ದು. ಆದರೂ ಕೆಲವು ಮಕ್ಕಳು ತಮ್ಮ ಪೋಷಕರಿಂದ ವಿವಿಧ ಕಾರಣಗಳಿಂದಾಗಿ ದೂರಾಗಿರಬಹುದು. ಅಂತಹ ಮಕ್ಕಳನ್ನು ಮತ್ತೆ ಅವರ ಪೋಷಕರ ಬಳಿಗೆ ಕರೆದೊಯ್ಯಲೇಬೇಕು. ಅಲ್ಲಿಯವರೆಗೆ ತಾತ್ಕಾಲಿಕ ವಸತಿ ನೀಡುವ ಜವಾಬ್ದಾರಿ ಸರಕಾರದ್ದು. ಅನೇಕ ಸ್ವಯಂಸೇವಾ ಸಂಸ್ಥೆಗಳು ಬೀದಿಯ ಮೇಲೆ ಬದುಕುವ, ಅಲೆಮಾರಿಗಳಾಗಿರುವ ಮಕ್ಕಳಿಗೆ ತಂಗುದಾಣಗಳನ್ನು ನಿರ್ಮಿಸಿ

ನಡೆಸುತ್ತಿವೆ. ಆದರೂ ಇಂತಹ ಹಿನ್ನಲೆಯಿರುವ ಎಲ್ಲಾ ಮಕ್ಕಳನ್ನು ಅವರವರ ಪೋಷಕರ ವಶಕ್ಕೆ ಆದಷ್ಟು ಬೇಗನೇ ತಲುಪಿಸುವುದು ಅತ್ಯಗತ್ಯ.

- ಸಂಕಷ್ಟದಲ್ಲಿರುವ ಎಲ್ಲಾ ಮಕ್ಕಳಿಗೆ ಸರಕಾರವೇ ಆಶ್ರಯ ಕೊಡಬಲ್ಲದೇ? ಎಂಬ ಇನ್ನೊಂದು ಪ್ರಶ್ನೆ ಆಗಾಗ್ಗೆ ಕೇಳಿಬರುತ್ತದೆ. ರಾಜ್ಯ ಸರಕಾರ ನಡೆಸುತ್ತಿರುವ ಸಂಸ್ಥೆಗಳು ಮಕ್ಕಳನ್ನು ಶಾಶ್ವತವಾಗಿ ಉಳಿಯಲು ಪ್ರೋತ್ಸಾಹಿಸುವುದಿಲ್ಲ. ತೊಂದರೆಯಲ್ಲಿರುವ ಎಲ್ಲಾ ಮಕ್ಕಳಿಗೆ ತಾತ್ಕಾಲಿಕವಾಗಿ ವಸತಿ ನೀಡಿ ಅವರು ಪುನರ್ವಸತಿ ಹೊಂದಲು ಸಹಾಯ ಮಾಡುತ್ತದೆ. ಸರಕಾರ ನಡೆಸುತ್ತಿರುವಂತಹದೇ ವ್ಯವಸ್ಥೆಗಳನ್ನು ಸ್ವಯಂಸೇವಾ ಸಂಸ್ಥೆಗಳು ನಡೆಸುವ ಬದಲು, ಸರಕಾರದ ವ್ಯವಸ್ಥೆಗಳನ್ನು ಬಲಪಡಿಸಿದರೆ ಇನ್ನೂ ಉತ್ತಮ ಸೇವೆಯನ್ನು ಒದಗಿಸಬಹುದು.

**ಉಡುಪಿ ಜಿಲ್ಲೆಯಲ್ಲಿರುವ ಮಕ್ಕಳ ಹಕ್ಕುಗಳ ಕಾನೂನುಬದ್ಧ ವ್ಯವಸ್ಥೆಗಳ ಸಾಧನೆಗಳು, ಸವಾಲುಗಳು, ಸಫಲತೆಗಳು ಮತ್ತು ವಿಫಲತೆಗಳು:**

**ಸಾಧನೆಗಳು:**

- ಮಕ್ಕಳ ಸಮಸ್ಯೆಗೆ ಸೂಕ್ತ ಕ್ರಮ ಕೈಗೊಂಡಿರುವುದು.
- ತಮ್ಮ ವ್ಯಾಪ್ತಿಯೊಳಗೆ ಕೆಲಸ ಮಾಡಿರುವುದು.

**ಸವಾಲುಗಳು:**

- ಇಲಾಖೆಗಳೊಡನೆ ಸಂಯೋಜನೆ, ನೆಟ್‌ವರ್ಕ್ ಸ್ಥಾಪನೆ ಮಾಡುವಂತಹದ್ದು.
- ಕಾರ್ಯಚಟುವಟಿಕೆಯ ಪ್ರಚಾರ, ಜನಸ್ಪಂದನೆ ಹೆಚ್ಚಿಸುವುದು.
- ರಾಜಕೀಯ ಒತ್ತಡ.
- ಇಲಾಖೆಯಿಂದ ಪೂರಕ ಸಹಕಾರವಿಲ್ಲದಿರುವುದ.
- ತಳಮಟ್ಟದ ಸಮುದಾಯದೊಡನೆ ಸಂಪರ್ಕ ಇಲ್ಲದಿರುವುದು.
- ಪೂರಕ ಅಂಕಿ ಅಂಶಗಳ, ಮಾಹಿತಿಗಳ ಕ್ರೋಢೀಕರಣ ಇಲ್ಲದಿರುವುದು.
- ಪರಿಕಲ್ಪನಾತ್ಮಕ ನಿಖರತೆ ಇಲ್ಲದಿರುವುದು.
- ಬದಲಾಗುತ್ತಿರುವ ನೀತಿಗಳು.

**ಸಫಲತೆಗಳು:**

- ✓ ನಿರಂತರವಾಗಿ ಮಕ್ಕಳ ಬಗ್ಗೆ ಕಾರ್ಯನಿರ್ವಹಿಸುತ್ತಿರುವುದು.
- ✓ ಮಕ್ಕಳ ನ್ಯಾಯ ಕಾಯಿದೆಯ ಪ್ರತಿಪಾದನೆ ಹಾಗೂ ಅನುಷ್ಠಾನ.
- ✓ ಹಕ್ಕು ಉಲ್ಲಂಘನೆಯಾದಾಗ ಕ್ರಮ ಕೈಗೊಂಡಿರುವುದು.

✓ ಮಕ್ಕಳ ಸಮಸ್ಯೆಗಳಿಗೆ ಸ್ಪಂದನೆ, ಸೂಕ್ತ ಕ್ರಮ.

**ವಿಫಲತೆಗಳು:**

- ಕಾಲಮಿತಿ ಇರುವುಂತಹದ್ದು.
- ಮಾಹಿತಿಯ ಕೊರತೆ.
- ಮಾರ್ಗದರ್ಶನದ ಕೊರತೆ.
- ಸೂಕ್ತ ಕಟ್ಟಡ, ಮೂಲ ಸೌಕರ್ಯವಿಲ್ಲ.
- ಸಮರ್ಪಕವಾದ ಅಂತರ್ಜಾಲ ಇಲ್ಲ.

ಒಟ್ಟಾರೆಯಾಗಿ ಮಕ್ಕಳ ಹಕ್ಕುಗಳು ಮತ್ತು ಅಭಿವೃದ್ಧಿಗೆ ಪೂರಕವಾಗಿ ಪ್ರಸ್ತುತ ಉಡುಪಿ ಜಿಲ್ಲೆಯಲ್ಲಿ ಈ ಎಲ್ಲಾ ವ್ಯವಸ್ಥೆಗಳನ್ನು ನೋಡಬಹುದಾಗಿದೆ. ಶಾಲೆಯ ಮೂಲದಿಂದ ಮಕ್ಕಳ ಹಕ್ಕುಗಳಿಗೆ ಪೂರಕವಾಗಿ ಮಕ್ಕಳ ಹಕ್ಕುಗಳ ಸಂಘದ ರಚನೆ, ಮೀನಾ ಕ್ಲಬ್, ಎಸ್.ಡಿ.ಎಂ.ಸಿ.ಯಲ್ಲಿ ಮಕ್ಕಳಿಗೆ ಪ್ರಾಧಾನ್ಯತೆ, ಮಕ್ಕಳ ವಿಶೇಷ ಗ್ರಾಮ ಸಭೆ, ಮುಂತಾದ ವ್ಯವಸ್ಥೆಗಳನ್ನು ಮಾಡಲಾಗಿದೆ. ಹಾಗೆಯೇ ಶಾಲೆಯನ್ನು ಬಿಟ್ಟು ಸಂಕಷ್ಟದಲ್ಲಿರುವ ಮಕ್ಕಳಿಗೆ ಪೂರಕವಾಗಿ ಮಕ್ಕಳ ಹಕ್ಕುಗಳು, ಮಕ್ಕಳ ನ್ಯಾಯ ಕಾಯಿದೆ, ಮಕ್ಕಳ ಕಲ್ಯಾಣ ಸಮಿತಿ, ಮಕ್ಕಳ ನ್ಯಾಯಮಂಡಳಿ, ಸಂಘ ಸಂಸ್ಥೆಗಳು ಮುಂತಾದ ವ್ಯವಸ್ಥೆಗಳಿವೆ.

# ಅಧ್ಯಾಯ ೪

## ಮಕ್ಕಳ ಹಕ್ಕುಗಳು ಮತ್ತು ಅಭಿವೃದ್ಧಿಯ ಮಾಹಿತಿ ವಿಶ್ಲೇಷಣೆ

ಉಡುಪಿ ಜಿಲ್ಲೆಯಲ್ಲಿನ ಮಕ್ಕಳ ಹಕ್ಕುಗಳು, ಸಮಸ್ಯೆಗಳು ಮತ್ತು ಅಭಿವೃದ್ಧಿಯ ಅಧ್ಯಯನಕ್ಕಾಗಿ ಮಾಹಿತಿ ಸಂಗ್ರಹಣೆಯನ್ನು ಉಡುಪಿ ಜಿಲ್ಲೆಯಲ್ಲಿ ನಡೆಸಲಾಗಿದೆ. ಅಂಕಿ ಅಂಶಗಳಲ್ಲಿ ನಿಖರತೆಯನ್ನು ಪಡೆಯುವ ಉದ್ದೇಶದಿಂದ ಕ್ಷೇತ್ರ ಕಾರ್ಯವನ್ನು ಉಡುಪಿ ಜಿಲ್ಲೆಯಲ್ಲಿನ ಐದು ಶಿಕ್ಷಣ ವಲಯಗಳಾದ ಕಾರ್ಕಳ, ಉಡುಪಿ, ಬ್ರಹ್ಮಾವರ, ಕುಂದಾಪುರ ಹಾಗೂ ಬೈಂದೂರು ಈ ಐದು ಶಿಕ್ಷಣವಲಯದಿಂದ ಹಾಗೂ ಮಕ್ಕಳೊಂದಿಗೆ ಕೆಲಸ ಮಾಡುವ ಸಂಘ ಸಂಸ್ಥೆಗಳಿಂದ ನಡೆಸಲಾಯಿತು. ಪ್ರಸ್ತುತ ಅಂಕಿ ಅಂಶಗಳ ವಿಶ್ಲೇಷಣೆಯನ್ನು ಎರಡು ವಿಭಾಗಗಳಲ್ಲಿ ನಡೆಸಲಾಗಿದೆ.

೧) ಶಾಲೆಯ ಮೂಲದಿಂದ ತೆಗದುಕೊಂಡ ಮಾಹಿತಿದಾರರು.

೨) ಮಕ್ಕಳೊಂದಿಗೆ ಕೆಲಸ ಮಾಡುವ ಸಂಘ ಸಂಸ್ಥೆಯ ಮೂಲದಿಂದ ತೆಗೆದುಕೊಂಡ ಮಾಹಿತಿದಾರರು.

**ಕೋಷ್ಟಕ ೪.೧.೧ ಮಾಹಿತಿದಾರರ ಲಿಂಗದ ವಿವರ.**

| ಕ್ರ.ಸಂ. | ಲಿಂಗ | ಮಾಹಿತಿದಾರರ ಸಂಖ್ಯೆ | ಶೇಕಡವಾರು |
|---|---|---|---|
| ೧. | ಹೆಣ್ಣು | ೧೭ | ೬೮% |
| ೨. | ಗಂಡು | ೮ | ೩೨% |
| | ಒಟ್ಟು | ೨೫ | ೧೦೦% |

ಮೇಲ್ಕಂಡ ಅಂಕಿ ಅಂಶಗಳು (ಕೋಷ್ಟಕ ೪.೧.೧) ಮಾಹಿತಿದಾರರ ಲಿಂಗವನ್ನು ವಿವರಿಸುತ್ತದೆ. ಶೇಕಡಾ ೬೮% ರಷ್ಟು ಮಹಿಳೆಯರು ಮತ್ತು ಶೇಕಡಾ ೩೨% ರಷ್ಟು ಪರುಷರು ಇರುವುದನ್ನು ಗಮನಿಸಲಾಗಿದೆ.

ರೇಖಾಚಿತ್ರ ೪.೧.೧ ಮಾಹಿತಿದಾರರ ವಯೋಮಾನದ ವಿವರ.




ಮೇಲ್ಕಂಡ ರೇಖಾಚಿತ್ರವು ಮಾಹಿತಿದಾರರ ವಯೋಮಾನದ ವರ್ಗೀಕರಣವನ್ನು ವಿವರಿಸುತ್ತದೆ. ರೇಖಾಚಿತ್ರ ೪.೧.೧ರ ದತ್ತಾಂಶಗಳು ತೋರಿಸುವಂತೆ, ಸಂಶೋಧಕರು ಶಾಲೆಯ ಮೂಲದಿಂದ ತೆಗೆದುಕೊಂಡ ಮಾಹಿತಿದಾರರಲ್ಲಿ ಅಂದರೆ ಶಿಕ್ಷಕ ವರ್ಗದವರಲ್ಲಿ ಶೇಕಡಾ ೩೬% ರಷ್ಟು ೩೧–೩೫ ವರ್ಷದವರು, ಶೇಕಡಾ ೩೨% ರಷ್ಟು ೨೫–೩೦ ವರ್ಷದವರು, ಶೇಕಡಾ ೧೬% ರಷ್ಟು ಶಿಕ್ಷಕರು ೩೬–೪೦ ವರ್ಷದವರು ಹಾಗೂ ೧೬ % ರಷ್ಟು ಶಿಕ್ಷಕರು ೪೦ಕ್ಕಿಂತ ಮೇಲ್ಪಟ್ಟ ವಯೋಮಾನದ ಗುಂಪಿಗೆ ಸೇರಿದವರಾಗಿರುತ್ತಾರೆ.

**ಕೋಷ್ಟಕ ೪.೧.೨ ಶಾಲಾ ವಯಸ್ಸಿನ ಎಲ್ಲಾ ಮಕ್ಕಳು ಶಾಲೆಗೆ ಹೋಗುವುದರ ವಿವರ.**

| ಕ್ರ. ಸಂ. | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧. | ಹೌದು | ೧೫ | ೬೦% |
| ೨. | ಇಲ್ಲ | ೧೦ | ೪೦% |
| | ಒಟ್ಟು | ೨೫ | ೧೦೦% |

ಮೇಲ್ಕಂಡ ಅಂಕಿ ಅಂಶಗಳು (ಕೋಷ್ಟಕ ೪.೧.೨) ಪ್ರಸ್ತುತ ಉಡುಪಿ ಜಿಲ್ಲೆಯಲ್ಲಿನ ಶಾಲಾ ವಯಸ್ಸಿನ ಎಲ್ಲಾ ಮಕ್ಕಳು ಶಾಲೆಗೆ ಹೋಗುವುದರ ವಿವರಗಳನ್ನು ನೀಡುತ್ತದೆ. ಶೇಕಡಾ ೬೦% ರಷ್ಟು ಶಿಕ್ಷಕ ವರ್ಗದವರ ಅಭಿಪ್ರಾಯದಂತೆ ಎಲ್ಲಾ ಮಕ್ಕಳು ಶಾಲೆಗೆ ಹೋಗುತ್ತಿದ್ದಾರೆ. ಆದರೆ ಶೇಕಡಾ ೪೦ % ರಷ್ಟು ಶಿಕ್ಷಕ ವರ್ಗದವರ ಅಭಿಪ್ರಾಯದಂತೆ ಇಲ್ಲ. ಯಾಕೆಂದರೆ ಉಡುಪಿಯಲ್ಲಿ ಹೆಚ್ಚಾಗಿ ವಲಸೆ ಕಾರ್ಮಿಕರ ಮಕ್ಕಳು ಮತ್ತು ಭಿಕ್ಷಾಟನೆಯಲ್ಲಿ ತೊಡಗಿರುವ ಮಕ್ಕಳಿದ್ದಾರೆ.

ಈ ಅಂಕಿ ಅಂಶವನ್ನು ಗಮನಿಸಿದಾಗ ಉಡುಪಿ ಜಿಲ್ಲೆಯಲ್ಲಿನ ಎಲ್ಲಾ ಮಕ್ಕಳು ಶಾಲೆಗೆ ಹೋಗುತ್ತಿದ್ದಾರೆ. ಹಾಗೆಯೇ ಉಡುಪಿ ಜಿಲ್ಲೆಯ ಬಡವರ ಮಕ್ಕಳು ಹೆತ್ತವರ ಜೊತೆ ಕೆಲಸದಲ್ಲಿ ಕೈ ಜೋಡಿಸುತ್ತಾರೆ. ಹಾಗೆಯೇ

ಉಡುಪಿ ಜಿಲ್ಲೆಗೆ ವಲಸೆ ಬರುವ ಕಾರ್ಮಿಕರ ಸಂಖ್ಯೆ ಹೆಚ್ಚಿದ್ದು, ಇವರ ಮಕ್ಕಳು ಕೂಲಿ ಕೆಲಸ ಹಾಗೂ ಭಿಕ್ಷಾಟನೆಯಲ್ಲಿ ತೊಡಗಿರುವುದನ್ನು ಗಮನಿಸಲಾಗಿದೆ.

**ಕೋಷ್ಟಕ ೪.೧.೩ ಶಾಲೆಗೆ ಸೇರಿದ ಎಲ್ಲಾ ಮಕ್ಕಳು ಕಾನೂನು ಬದ್ಧವಾಗಿ ೧–೮ ನೇ ತರಗತಿಯವರೆಗೆ ನಿರಂತರವಾಗಿ ಕಲಿಯುವುದರ ವಿವರ.**

| ಕ್ರ.ಸಂ. | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧. | ಹೌದು | ೧೩ | ೫೨ % |
| ೨. | ಇಲ್ಲ | ೧೨ | ೪೮ % |
| | ಒಟ್ಟು | ೨೫ | ೧೦೦ % |

ಕೋಷ್ಟಕ ೪.೧.೩ರಲ್ಲಿ ಕಾಣುವ ಅಂಕಿ ಅಂಶಗಳು ಶಾಲೆಗೆ ಸೇರಿದ ಎಲ್ಲಾ ಮಕ್ಕಳು ಕಾನೂನು ಬದ್ಧವಾಗಿ ೧ – ೮ ನೇ ತರಗತಿಯವರೆಗೆ ನಿರಂತರವಾಗಿ ಕಲಿಯುವುದರ ವರ್ಗೀಕರಣವನ್ನು ವಿವರಿಸುತ್ತದೆ. ಶೇಕಡಾ ೫೨ % ರಷ್ಟು ಶಿಕ್ಷಕ ವರ್ಗದವರ ಅಭಿಪ್ರಾಯದಂತೆ ನಿರಂತರವಾದ ಕಲಿಕೆಯಿದೆ. ಅದರೆ ಶೇಕಡಾ ೪೮ % ಶಿಕ್ಷಕ ವರ್ಗದವರು ಇದನ್ನು ಒಪ್ಪುತ್ತಿಲ್ಲ. ಯಾಕೆಂದರೆ ಈಗ ತಾತ್ಕಾಲಿಕ ಹಾಜರಾತಿಯ ವ್ಯವಸ್ಥೆ ಪ್ರತಿಯೊಂದು ಶಾಲೆಯಲ್ಲಿವೆ. ಇವರಲ್ಲಿ ವಲಸೆ ಹೋಗುವವರ ಹಾಗೂ ವಲಸೆ ಬರುವವರ ಮಕ್ಕಳ ಹಾಜರಾತಿ ಇರುತ್ತದೆ. ವಲಸೆ ಕಾರ್ಮಿಕರು ವರ್ಷ ವರ್ಷಕ್ಕೆ ತಮ್ಮ ವಾಸ್ತವ್ಯವನ್ನು ಬದಲಾಯಿಸುವುದರಿಂದ ಉಡುಪಿ ಜಿಲ್ಲೆಯಲ್ಲಿನ ಮಕ್ಕಳ ನಿರಂತರ ಕಲಿಕೆಯಿಲ್ಲ ಎಂಬುದನ್ನು ಗಮನಿಸಲಾಗಿದೆ.

**ರೇಖಾಚಿತ್ರ ೪.೧.೨ ಶಾಲೆಗಳಲ್ಲಿ ಚಟುವಟಿಕೆ ಆಧಾರಿತ ತರಗತಿಗಳಿಂದ ವಿದ್ಯಾರ್ಥಿಗಳಿಗಾದ ಪ್ರಯೋಜನದ ವಿವರ.**




ರೇಖಾಚಿತ್ರ ೪.೧.೨ರಲ್ಲಿ ಕಾಣುವಂತೆ, ಶಾಲೆಗಳಲ್ಲಿನ ಚಟುವಟಿಕೆ ಆಧಾರಿತ ತರಗತಿಗಳಿಂದ ವಿದ್ಯಾರ್ಥಿಗಳಿಗಾದ ಪ್ರಯೋಜನದ ವರ್ಗೀಕರಣವನ್ನು ವಿವರಿಸುತ್ತದೆ. ಉಡುಪಿ ಜಿಲ್ಲೆಯಲ್ಲಿನ ಶೇಕಡಾ ೩೬% ರಷ್ಟು ಶಿಕ್ಷಕ ವರ್ಗದವರ ಅಭಿಪ್ರಾಯದಂತೆ ಮಕ್ಕಳಲ್ಲಿ ಕಲಿಕಾ ಮಟ್ಟ ಹೆಚ್ಚಳವಾಗಿದೆ, ಶೇಕಡಾ ೨೮% ರಷ್ಟು ಶಿಕ್ಷಕರ ಅಭಿಪ್ರಾಯದಂತೆ ಶಿಕ್ಷಕರ ವಿದ್ಯಾರ್ಥಿಗಳ ಅಂತರ ಕಡಿಮೆಯಾಗಿದೆ. ಶೇಕಡಾ ೨೦% ರಷ್ಟು ಶಿಕ್ಷಕರ ಅಭಿಪ್ರಾಯದಂತೆ ಮಕ್ಕಳಲ್ಲಿ ಭಾಗವಹಿಸುವಿಕೆಯ ಹೆಚ್ಚಳವಾಗಿದೆ ಹಾಗೂ ಶೇಕಡಾ ೧೬% ಶಿಕ್ಷಕರ ಅಭಿಪ್ರಾಯದಂತೆ ಮಕ್ಕಳ ಹಾಜರಾತಿಯಲ್ಲಿ ಹೆಚ್ಚಳವಾಗಿದೆ.

ಇಲ್ಲಿರುವ ಅಂಕಿ ಅಂಶವನ್ನು ಗಮನಿಸಿದಾಗ ಶಾಲೆಗಳಲ್ಲಿ ಚಟುವಟಿಕೆ ಆಧಾರಿತ ತರಗತಿಗಳಿಂದ ಮಕ್ಕಳಲ್ಲಿ ಸಕಾರಾತ್ಮಕ ಹಾಗೂ ಅಭಿವೃದ್ಧಿದಾಯಕ ಬದಲಾವಣೆಯನ್ನು ಗಮನಿಸಲಾಗಿದೆ.

**ಕೋಷ್ಟಕ ೪.೧.೪ ಶಾಲೆಯ ಮಕ್ಕಳ ಅಭಿವೃದ್ಧಿದಗಾಗಿ ನಿರ್ದಿಷ್ಟ ಯೋಜನೆಗಳ ವಿವರ.**

| ಕ್ರ.ಸಂ. | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧. | ಹೌದು | ೨೩ | ೯೨% |
| ೨. | ಇಲ್ಲ | ೨ | ೮% |
| | ಒಟ್ಟು | ೨೫ | ೧೦೦% |

ಮೇಲ್ಕಂಡ ಅಂಕಿ ಅಂಶಗಳು (ಕೋಷ್ಟಕ ೪.೧.೪) ಶಾಲೆಯ ಮಕ್ಕಳ ಅಭಿವೃದ್ಧಿಗಾಗಿ ನಿರ್ದಿಷ್ಟ ಯೋಜನೆಗಳ ವರ್ಗೀಕರಣವನ್ನು ವಿವರಿಸುತ್ತದೆ. ಶೇಕಡಾ ೯೨% ರಷ್ಟು ಶಿಕ್ಷಕರ ಅಭಿಪ್ರಾಯದಂತೆ ಶಾಲೆಯ ಮಕ್ಕಳ ಅಭಿವೃದ್ಧಿಗಾಗಿ ನಿರ್ದಿಷ್ಟ ಕ್ರಿಯಾ ಯೋಜನೆಯನ್ನು ಶಾಲಾ ಪ್ರಾರಂಭದ ಜೂನ್ ತಿಂಗಳಿನಲ್ಲಿ ವಾರ್ಷಿಕ ಕ್ರಿಯಾ ಯೋಜನೆಯನ್ನು ತಯಾರಿಸುವಾಗ ತೆಗೆದುಕೊಳ್ಳಲಾಗುತ್ತದೆ. ಅದರೆ ೮% ರಷ್ಟು ಶಿಕ್ಷಕರ ಅಭಿಪ್ರಾಯದಲ್ಲಿ ತೆಗೆದುಕೊಳ್ಳಲಾಗುತ್ತಿಲ್ಲ ಎನ್ನುವುದನ್ನು ಗಮನಿಸಲಾಗಿದೆ.

**ಕೋಷ್ಟಕ ೪.೧.೫ ಶಾಲೆಯ ಎಸ್.ಡಿ.ಎಂ.ಸಿ. ಗಳಲ್ಲಿ ಮಕ್ಕಳ ಪ್ರಾತಿನಿಧ್ಯತೆಯ ವಿವರ.**

| ಕ್ರ.ಸಂ. | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧. | ಹೌದು | ೨೨ | ೮೮% |
| ೨. | ಇಲ್ಲ | ೩ | ೧೨% |
| | ಒಟ್ಟು | ೨೫ | ೧೦೦% |

ಮೇಲ್ಕಂಡ ಅಂಕಿ ಅಂಶಗಳು (ಕೋಷ್ಟಕ ೪.೧.೫) ಶಾಲೆಯ ಎಸ್.ಡಿ.ಎಂ.ಸಿ.ಗಳಲ್ಲಿ ಮಕ್ಕಳ ಪ್ರಾತಿನಿಧ್ಯತೆಯ ವರ್ಗೀಕರಣವನ್ನು ವಿವರಿಸುತ್ತದೆ. ಶೇಕಡಾ ೮೮% ರಷ್ಟು ಶಾಲೆಯಲ್ಲಿ ಎಸ್.ಡಿ.ಎಂ.ಸಿ.ಗಳಲ್ಲಿ ಮಕ್ಕಳ ಪ್ರಾತಿನಿಧ್ಯತೆಯಿದ್ದು. ಪ್ರತಿಯೊಂದು ಶಾಲೆಯ ೭ನೇ ತರಗತಿಯಿಂದ ಒಬ್ಬ ಹುಡುಗ ಮತ್ತು ಒಬ್ಬ ಹುಡುಗಿ ಎಸ್.ಡಿ.ಎಂ.ಸಿ,ಯಲ್ಲಿ ಇರುತ್ತಾರೆ. ಮಕ್ಕಳ ಅಭಿವೃದ್ದಿಗಾಗಿ ನಿರ್ಧಾರ ಕೈಗೊಳ್ಳುವಾಗ ಮಕ್ಕಳ ಪ್ರಾತಿನಿಧ್ಯತೆಯನ್ನು ತೆಗೆದುಕೊಳ್ಳಲಾಗುತ್ತಿದೆ. ಆದರೆ ಶೇಕಡಾ ೧೨% ರಷ್ಟು ಶಾಲೆಯಲ್ಲಿ ಮಕ್ಕಳ ಪ್ರಾತಿನಿಧ್ಯತೆಯು ಹೆಸರಿಗೆ ಮಾತ್ರ ಇದ್ದು ಮಕ್ಕಳ ಅಭಿಪ್ರಾಯವನ್ನು ಗಣನೆಗೆ ತೆಗೆದುಕೊಳ್ಳದಿರುವುದನ್ನು ಗಮನಿಸಲಾಗಿದೆ.

**ರೇಖಾಚಿತ್ರ ೪.೧.೩ ಶಾಲೆಗಳಲ್ಲಿ ಮಕ್ಕಳ ಹಕ್ಕುಗಳ ಸಂರಕ್ಷಣೆಗಾಗಿ ನಿರ್ಣಯ ತೆಗೆದುಕೊಳ್ಳುವುದರ ವಿವರ.**



ರೇಖಾಚಿತ್ರ ೪.೧.೩ರಲ್ಲಿ ನಮೂದಿಸಿರುವ ಅಂಕಿ ಅಂಶವು ಶಾಲೆಗಳಲ್ಲಿ ಮಕ್ಕಳ ಹಕ್ಕುಗಳ ಸಂರಕ್ಷಣೆಗಾಗಿ ನಿರ್ಣಯ ತೆಗೆದುಕೊಳ್ಳುವುದರ ವರ್ಗೀಕರಣವನ್ನು ವಿವರಿಸುತ್ತದೆ. ಶೇಕಡಾ ೮೪% ರಷ್ಟು ಶಾಲೆಗಳಲ್ಲಿ ಮಕ್ಕಳ ಹಕ್ಕುಗಳ ಸಂರಕ್ಷಣೆಗಾಗಿ ನಿರ್ಣಯ ತೆಗೆದುಕೊಳ್ಳಲಾಗುತ್ತಿದೆ. ಹಾಗೆಯೇ ಶೇಕಡಾ ೧೬% ರಷ್ಟು ಶಾಲೆಗಳಲ್ಲಿ ಮಕ್ಕಳ ಹಕ್ಕುಗಳ ಸಂರಕ್ಷಣೆಗಾಗಿ ನಿರ್ಣಯ ತೆಗೆದುಕೊಳ್ಳಲಾಗುತ್ತಿಲ್ಲ ಎನ್ನುವುದನ್ನು ಗಮನಿಸಲಾಗಿದೆ.

**ಕೋಷ್ಟಕ ೪.೧.೬ ಶಾಲೆಗಳಲ್ಲಿ ಮಕ್ಕಳ ಹಕ್ಕುಗಳ ಪ್ರತಿನಿಧಿ"ಮೀನಾ ಕ್ಲಬ್"ವ್ಯವಸ್ಥಿತವಾಗಿ ನಡೆಯುವುದದರ ವಿವರ.**

| ಕ್ರ.ಸಂ. | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧. | ಹೌದು | ೨೨ | ೮೮% |
| ೨. | ಇಲ್ಲ | ೩ | ೧೨% |
| | ಒಟ್ಟು | ೨೫ | ೧೦೦% |

ಕೋಷ್ಟಕ ೪.೧.೬ರಲ್ಲಿ ನಮೂದಿಸಿರುವ ಅಂಕಿ ಅಂಶವು ಶಾಲೆಗಳಲ್ಲಿ ಮಕ್ಕಳ ಹಕ್ಕುಗಳ ಪ್ರತಿನಿಧಿ **"ಮೀನಾ ಕ್ಲಬ್"** ವ್ಯವಸ್ಥಿತವಾಗಿ ನಡೆಯುವುದರ ವರ್ಗೀಕರಣವನ್ನು ವಿವರಿಸುತ್ತದೆ. ಶೇಕಡಾ ೮೮% ರಷ್ಟು ಶಾಲೆಗಳಲ್ಲಿ **"ಮೀನಾಕ್ಲಬ್"** ವ್ಯವಸ್ಥಿತವಾಗಿ ನಡೆಯುತ್ತಿದೆ. ಹಾಗೆಯೇ ಶೇಕಡಾ ೧೨% ರಷ್ಟು ಶಾಲೆಗಳಲ್ಲಿ ವ್ಯವಸ್ಥಿತವಾಗಿ ನಡೆಯುತ್ತಿಲ್ಲ ಎಂಬುದನ್ನು ಗಮನಿಸಲಾಗಿದೆ. ಯಾಕೆಂದರೆ ಶಿಕ್ಷಕರಿಗೆ ಮಾಹಿತಿಯ ಕೊರತೆ, ಸೂಕ್ತ ತರಬೇತಿಯ ಕೊರತೆ ಹಾಗೂ ವಿಷಯಗಳಿಗೆ ಪೂರಕವಾದ ಅಧ್ಯಯನ ಸಾಮಾಗ್ರಿಯ ಪೂರೈಕೆಯ ಕೊರತೆಯನ್ನು ಗುರುತಿಸಲಾಗಿದೆ.

**ಕೋಷ್ಟಕ ೪.೧.೭ ಶಾಲೆಗಳಲ್ಲಿ ಮಕ್ಕಳ ದೂರು/ಸಲಹಾ ಪೆಟ್ಟಿಗೆಯಿದ್ದು ನಿಯಮದಂತೆ ತೆಗೆದು ನಿರ್ವಹಣೆಯ ವಿವರ.**

| ಕ್ರ.ಸಂ. | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧. | ಹೌದು | ೧೭ | ೬೮% |
| ೨. | ಇಲ್ಲ | ೮ | ೩೨% |
| | ಒಟ್ಟು | ೨೫ | ೧೦೦% |

ಮೇಲ್ಕಂಡ ಅಂಕಿ ಅಂಶವು (ಕೋಷ್ಟಕ ೪.೧.೭) ಶಾಲೆಗಳಲ್ಲಿ ಮಕ್ಕಳ ದೂರು/ಸಲಹಾ ಪಟ್ಟಿಗೆಯನ್ನು ನಿಯಮದಂತೆ ತೆರೆದು ನಿರ್ವಹಣೆ ಮಾಡುವ ವರ್ಗೀಕರಣವನ್ನು ವಿವರಿಸುತ್ತದೆ. ಶೇಕಡಾ ೬೮% ರಷ್ಟು ಶಾಲೆಗಳಲ್ಲಿ, ಈ ವ್ಯವಸ್ಥೆಯಿರುತ್ತದೆ. ಹಾಗೆಯೇ ೩೨% ರಷ್ಟು ಶಾಲೆಗಳಲ್ಲಿ ಈ ವ್ಯವಸ್ಥೆಯಿದ್ದರೂ, ಅದನ್ನು ಸಮರ್ಪಕವಾಗಿ ನಿಬಾಯಿಸುತ್ತಿಲ್ಲ. ಇಲ್ಲಿ ವಾರಕ್ಕೊಮ್ಮೆ ಮೂರು/ಸಲಹಾ ಪೆಟ್ಟಿಗೆಯನ್ನು ತೆರೆದು ವಿಲೇವಾರಿ ಮಾಡಲಾಗುತ್ತಿಲ್ಲ. ಕೆಲವೊಂದು ಕಡೆ ನಿರ್ಲಕ್ಷ್ಯ ಮಡುವುದನ್ನು ಗಮನಿಸಲಾಗಿದೆ.

**ಕೋಷ್ಟಕ ೪.೧.೮ ಮಕ್ಕಳಿಗೆ ಅವರ ಹಕ್ಕುಗಳ ಬಗ್ಗೆ ತಿಳುವಳಿಕೆಯ ವಿವರ.**

| ಕ್ರ.ಸಂ. | ವರ್ಗೀಕರಣ | ಮಾಹಿತಿದಾರರು | ಶೇಕಡಾ |
|---|---|---|---|
| ೧. | ಹೌದು | ೧೯ | ೭೬% |
| ೨. | ಇಲ್ಲ | ೬ | ೨೪% |
| | ಒಟ್ಟು | ೨೫ | ೧೦೦% |

ಕೋಷ್ಟಕ ೪.೧.೮ರಲ್ಲಿ ನಮೂದಿಸಿರವ ಅಂಕಿ ಅಂಶವು ಮಕ್ಕಳಿಗೆ ಅವರ ಹಕ್ಕುಗಳ ಬಗ್ಗೆ ತಿಳುವಳಿಕೆಯ ವರ್ಗೀಕರಣವನ್ನು ವಿವರಿಸುತ್ತದೆ. ಶೇಕಡಾ ೭೬% ರಷ್ಟು ಮಕ್ಕಳಿಗೆ ತಮ್ಮ ಹಕ್ಕುಗಳ ಬಗ್ಗೆ ಅರಿವಿದೆ. ಇದನ್ನು ಮಕ್ಕಳ ಹಕ್ಕುಗಳ ತರಬೇತಿ ಕಾರ್ಯಕ್ರಮವನ್ನು ನಡೆಸುವಾಗ ಗಮನಿಸಲಾಗಿದೆ. ಶಾಲೆಯ ಗ್ರಂಥಾಲಯದಲ್ಲಿ ಮಕ್ಕಳ ಹಕ್ಕುಗಳ ಸಾಹಿತ್ಯದ ಇರುವಿಕೆ ಹಾಗೂ ಅದರ ಬಳಕೆಯನ್ನು ನೋಡಿ ತಿಳಿಯಲಾಗಿದೆ. ಹಾಗೆಯೇ ಶೇಕಡಾ ೨೪% ರಷ್ಟು ಮಕ್ಕಳಲ್ಲಿ ಹಕ್ಕುಗಳ ಅರಿವಿನ ಕೊರತೆಯಿರುವುದನ್ನು ಗಮನಿಸಲಾಗಿದೆ. ಇಲ್ಲಿ ಮಕ್ಕಳಿಗೆ ಮಾಹಿತಿಯ ಕೊರತೆಯಿರುವುದನ್ನು ಗಮನಿಸಲಾಗಿದೆ.

**ಕೋಷ್ಟಕ ೪.೨.೧ ಮಾಹಿತಿದಾರರ ಲಿಂಗದ ಮಾಹಿತಿ.**

| ಕ್ರ.ಸಂ. | ವರ್ಗೀಕರಣ | ಮಾಹಿತಿದಾರರು | ಶೇಕಡಾ |
|---|---|---|---|
| ೧. | ಹೆಣ್ಣು | ೧೮ | ೭೨% |
| ೨. | ಗಂಡು | ೭ | ೨೮% |
| | ಒಟ್ಟು | ೨೫ | ೧೦೦% |

ಮೇಲ್ಕಂಡ ಅಂಕಿ ಅಂಶವು (ಕೋಷ್ಟಕ ೪.೨.೧) ಪುರುಷ ಮತ್ತು ಮಹಿಳೆಯರ ಸಂಖ್ಯೆಯ ವರ್ಗೀಕರಣವನ್ನು ವಿವರಿಸುತ್ತದೆ. ಶೇಕಡಾ ೭೨% ರಷ್ಟು ಮಹಿಳೆಯರು ಹಾಗೂ ಶೇಕಡಾ ೨೮% ರಷ್ಟು ಪುರುಷರು ಇರುವುದನ್ನು ಗಮನಿಸಲಾಗಿದೆ.

**ರೇಖಾಚಿತ್ರ ೪.೨.೧ ಮಾಹಿತಿದಾರರ ವಯೋಮಾನದ ವಿವರ.**




ಮೇಲ್ಕಂಡ ಅಂಕಿ ಅಂಶವು (ರೇಖಾಚಿತ್ರ ೪.೨.೧) ವಯೋಮಾನದ ವರ್ಗೀಕರಣವನ್ನು ವಿವರಿಸುತ್ತದೆ. ಶೇಕಡಾ ೪೦ % ರಷ್ಟು ಮಾಹಿತಿದಾರರು ೪೧ ಮತ್ತು ಅದಕ್ಕಿಂತ ಹೆಚ್ಚಿನ ವಯೋಮಾನದ ಗುಂಪಿಗೆ ಸೇರಿದವರಾಗಿದ್ದಾರೆ. ಶೇಕಡಾ ೨೪% ರಷ್ಟು ಮಾಹಿತಿದಾರರು ೩೬–೪೦ ಶೇಕಡಾ ೨೦% ರಷ್ಟು ಮಾಹಿತಿದಾರರು ೩೧–೩೫ ಹಾಗೂ ಶೇಕಡಾ ೧೬% ರಷ್ಟು ಮಾಹಿತಿದಾರರು ೨೫–೩೦ ವಯೋಮಾನದ ಗುಂಪಿಗೆ ಸೇರಿರುತ್ತಾರೆ.

**ಕೋಷ್ಟಕ ೪.೨.೨ ಬಾಲ ಕಾರ್ಮಿಕತೆಯು ಮುಕ್ತವಾಗಿರುವ ವಿವರ.**

| ಕ್ರ.ಸಂ. | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧. | ಹೌದು | ೧೦ | ೪೦% |
| ೨. | ಇಲ್ಲ | ೧೫ | ೬೦% |
| | ಒಟ್ಟು | ೨೫ | ೧೦೦% |

ಕೋಷ್ಟಕ ೪.೨.೨ರಲ್ಲಿ ನಮೂದಿಸಿದಂತೆ ಉಡುಪಿ ಜಿಲ್ಲೆಯು ಬಾಲ ಕಾರ್ಮಿಕತೆಯಿಂದ ಮುಕ್ತವಾಗಿರುವ ವಿವರಣೆಯನ್ನು ನೀಡುತ್ತದೆ. ಶೇಕಡಾ ೬೦% ರಷ್ಟು ಉಡುಪಿ ಜಿಲ್ಲೆಯಲ್ಲಿ ಮಕ್ಕಳೊಂದಿಗೆ ನೇರವಾಗಿ ಕೆಲಸ ಮಾಡುವ ಸಂಘ ಸಂಸ್ಥೆಗಳ ಪ್ರಕಾರ ಮುಕ್ತತೆ ಹೊಂದಿಲ್ಲ. ಯಾಕೆಂದರೆ ಜನರಿಗೆ ಅರಿವಿನ ಕೊರತೆಯಿದ್ದು ಅವರಿಗೆ ಮಕ್ಕಳ ಹಕ್ಕುಗಳ ಬಗ್ಗೆ ತಿಳಿದಿಲ್ಲ. ಮಕ್ಕಳು ಅಸುರಕ್ಷತೆಯಲ್ಲಿರುವುದರಿಂದ ಪಾಲಕರಿಗೆ / ಪೋಷಕರಿಗೆ ಅರಿವಿನ ಕೊರತೆ, ಕೆಲಸಗಾರರ ಕೊರತೆಯಿಂದ, ಕಡಿಮೆ ಸಂಬಳದ ಸಾಧ್ಯತೆ, ಹೆಚ್ಚು ಹೊತ್ತು ಕೆಲಸ ಹಾಗೂ ಇವುಗಳನ್ನೇಲ್ಲಾ ಕಾಣುವುದು ವಲಸೆ ಬಂದ ಜನರಿಂದ ಹಾಗೂ ಇವರ ಮಕ್ಕಳು ಬಾಲ ಕಾರ್ಮಿಕತೆ ಹಾಗೂ ಭಿಕ್ಷಾಟನೆಯಲ್ಲಿ ತೊಡಗಿರುವುದನ್ನು ಗಮನಿಸಲಾಗಿದೆ. ಶೇಕಡಾ ೪೦% ರಷ್ಟು ಸಂಘ ಸಂಸ್ಥೆಯವರ ಅಭಿಪ್ರಾಯದಲ್ಲಿ ಉಡುಪಿಯು ಬಾಲ ಕಾರ್ಮಿಕತೆಯಿಂದ ಮುಕ್ತತೆ ಹೊಂದಿದೆ. ಮಕ್ಕಳನ್ನು ಶಾಲೆಗೆ ಹಾಜರಾತಿ

ಮಾಡುವ, ಸಮುದಾಯದಲ್ಲಿ ಜನಜಾಗೃತಿ ಕಾರ್ಯಕ್ರಮ, ಹೆತ್ತವರಿಗೆ ಮಕ್ಕಳ ಕಲಿಕೆಯ ಬಗ್ಗೆ ಮಾಹಿತಿ ನೀಡುವಂತಹ ಸೂಕ್ತ ಕ್ರಮವನ್ನು ಅನುಸರಿಸಲಾಗಿದೆ. ಅಲ್ಲದೆ ಬೇರೆ ಕಡೆಯಿಂದ ವಲಸೆ ಬಂದವರು ಇಲ್ಲಿ ಬಾಲ ಕಾರ್ಮಿಕತೆ ಹಾಗೂ ಭಿಕ್ಷಾಟನೆಯಲ್ಲಿ ತೊಡಗಿರುವುದನ್ನು ಗಮನಿಸಲಾಗಿದೆ.

**ಕೋಷ್ಟಕ ೪.೨.೩ ಬಾಲ ಕಾರ್ಮಿಕ ಪದ್ದತಿ ವಿರೋಧ ಅಂದೋಲನ ಸಮಿತಿಗಳು ಕಾರ್ಯನಿರ್ವಹಿಸುತ್ತಿರುವ ವಿವರ.**

| ಕ್ರ.ಸಂ. | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧. | ಹೌದು | ೧೯ | ೭೬% |
| ೨. | ಇಲ್ಲ | ೬ | ೨೪% |
| | ಒಟ್ಟು | ೨೫ | ೧೦೦% |

ಮೇಲ್ಕಂಡ ಅಂಕಿ ಅಂಶವು (ಕೋಷ್ಟಕ ೪.೨.೩) ಬಾಲ ಕಾರ್ಮಿಕ ಪದ್ಧತಿ ವಿರೋಧಿ ಆಂದೋಲನ ಸಮಿತಿಗಳು ಕಾರ್ಯ ನಿರ್ವಹಿಸುತ್ತಿರುವ ವರ್ಗೀಕರಣವನ್ನು ವಿವರಿಸುತ್ತದೆ. ಶೇಕಡಾ ೭೬% ರಷ್ಟು ಸಂಘ ಸಂಸ್ಥೆಯವರ ಪ್ರಕಾರ ಕಾರ್ಯನಿರ್ವಹಿಸುತ್ತಿದೆ. ಅದರೆ ಶೇಕಡಾ ೨೪% ರಷ್ಟು ಸಂಘ ಸಂಸ್ಥೆಯ ಪ್ರಕಾರ ಈ ಸಮಿತಿಗಳನ್ನು ರಚಿಸಲಾಗಿದೆಯಾದರೂ, ಹಿತಾಸಕ್ತಿ ಕೊರತೆಯಿಂದ; ಸಂವೇದನಾ ಶೀಲತೆಯ ಕೊರತೆಯಿಂದ ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಿಲ್ಲವೆಂದು ಗಮನಿಸಲಾಗಿದೆ.

**ಕೋಷ್ಟಕ ೪.೨.೪ ಈ ಸಮಿತಿಗಳು ತಿಂಗಳಿಗೊಮ್ಮೆ ಸಭೆ ಸೇರಿ ತಮ್ಮ ಚಟುವಟಿಕೆ ನಿರ್ವಹಿಸುವುದರ ವಿವರ.**

| ಕ್ರ.ಸಂ. | ವರ್ಗೀಕರಣ | ಮಾಹಿತಿದಾರ ಸಂಖ್ಯೆ | ಶೇಕಡಾ |
|---|---|---|---|
| ೧. | ಹೌದು | ೫ | ೨೦ % |
| ೨. | ಇಲ್ಲ | ೨೦ | ೮೦ % |
| | ಒಟ್ಟು | ೨೫ | ೧೦೦ % |

ಮೇಲ್ಕಂಡ ಅಂಕಿ ಅಂಶವು (ಕೋಷ್ಟಕ ೪.೨.೪) ಬಾಲ ಕಾರ್ಮಿಕ ಪದ್ಧತಿ ವಿರೋಧಿ ಆಂದೋಲನ ಸಮಿತಿಗಳು ತಿಂಗಳಿಗೊಮ್ಮೆ ಸಭೆ ಸೇರಿ ತಮ್ಮ ಚಟುವಟಿಕೆ ನಿರ್ವಹಿಸುವುದರ ವರ್ಗೀಕರಣವನ್ನು ವಿವರಿಸುತ್ತದೆ. ಶೇಕಡಾ ೮೦% ರಷ್ಟು ಸಂಘ ಸಂಸ್ಥೆಯವರ ಅಭಿಪ್ರಾಯದಂತೆ ಸಮಿತಿಯನ್ನು ಹೆಸರಿಗೆ ಮಾತ್ರ ರಚಿಸಲಾಗಿದ್ದು, ಸದಸ್ಯರಿಗೆ ಅದರ ಬಗ್ಗೆ ಮಾಹಿತಿಯು ಇಲ್ಲದಿರುವುದನ್ನು ಗಮನಿಸಲಾಗಿದೆ. ಹಾಗೆಯೇ ಶೇಕಡಾ ೨೦% ರಷ್ಟು ಸಂಘ ಸಂಸ್ಥೇಯವರ ಅಭಿಪ್ರಾಯದಂತೆ ಈ ಸಮಿತಿಗಳು ಕಾರ್ಯನಿರ್ವಹಿಸುತ್ತಿವೆ.

**ಕೋಷ್ಟಕ ೪.೨.೫ ಮಕ್ಕಳ ಹಕ್ಕುಗಳ ರಕ್ಷಣಾ ಸಮಿತಿಗಳು ಸಮರ್ಪಕವಾಗಿ ಕಾರ್ಯ ನಿರ್ವಹಿಸುವುದರ ವಿವರ.**

| ಕ್ರ.ಸಂ. | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧. | ಹೌದು | ೯ | ೩೬% |
| ೨. | ಇಲ್ಲ | ೧೬ | ೬೪% |
| | ಒಟ್ಟು | ೨೫ | ೧೦೦% |

ಮೇಲ್ಕಂಡ ಅಂಕಿ ಅಂಶವು (ಕೋಷ್ಟಕ ೪.೨.೫) ಮಕ್ಕಳ ಹಕ್ಕುಗಳ ರಕ್ಷಣಾ ಸಮಿತಿಗಳು ಸಮರ್ಪಕವಾಗಿ ಕಾರ್ಯ ನಿರ್ವಹಿಸುವುದರ ವರ್ಗೀಕರಣವನ್ನು ವಿವರಿಸುತ್ತದೆ. ಶೇಕಡಾ ೬೪% ರಷ್ಟು ಸಂಘ ಸಂಸ್ಥೆಯವರ ಅಭಿಪ್ರಾಯದಂತೆ ಈ ಸಮಿತಿಗಳು ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಿಲ್ಲ. ಅದರ ಅಸ್ಥಿತ್ವದ ಕುರಿತು ಜನರಲ್ಲಿ ಅರಿವಿಲ್ಲ. ಮಾಹಿತಿಯ ಕೊರತೆ ಹಾಗೂ ಹೊಸತಾಗಿ ಅಸ್ತಿತ್ವಕ್ಕೆ ಬಂದಿರುವ ಐ.ಸಿ.ಪಿ.ಎಸ್. ವ್ಯವಸ್ಥೆ ಇನ್ನೂ ನಿಜ ಆಶಯದಂತೆ ಸಮರ್ಪಕವಾಗಿ ಕೆಲಸ ನಿರ್ವಹಿಸಲು ಆರಂಭಿಸಿರುವುದಿಲ್ಲದ್ದನ್ನು ಗಮನಿಸಲಾಗಿದೆ. ಹಾಗೆಯೇ ಶೇಕಡಾ ೩೬% ರಷ್ಟು ಸಂಘ ಸಂಸ್ಥೆಯವರ ಅಭಿಪ್ರಾಯದಂತೆ ಈ ಸಮಿತಿಗಳು ಸಮರ್ಪಕವಾಗಿ ಕಾರ್ಯನಿರ್ವಹಿಸುತ್ತಿವೆ.

**ಕೋಷ್ಟಕ ೪.೨.೬ ಸಮಗ್ರ ಮಕ್ಕಳ ರಕ್ಷಣಾ ಘಟಕ ಸಮರ್ಪಕವಾಗಿ ಕಾರ್ಯ ನಿರ್ವಹಿಸುವುದರ ವಿವರ.**

| ಕ್ರ.ಸಂ. | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧. | ಹೌದು | ೧೧ | ೪೪% |
| ೨. | ಇಲ್ಲ | ೧೪ | ೫೬% |
| | ಒಟ್ಟು | ೨೫ | ೧೦೦% |

ಮೇಲ್ಕಂಡ ಅಂಕಿ ಅಂಶವು (ಕೋಷ್ಟಕ ೪.೨.೬) ಸಮಗ್ರ ಮಕ್ಕಳ ರಕ್ಷಣಾ ಘಟಕ ಸಮರ್ಪಕವಾಗಿ ಕಾರ್ಯನಿರ್ವಹಿಸುವುದರ ವರ್ಗೀಕರಣವನ್ನು ವಿವರಿಸುತ್ತದೆ. ಶೇಕಡಾ ೫೬% ರಷ್ಟು ಸಂಘ ಸಂಸ್ಥೆಯವರ ಅಭಿಪ್ರಾಯದಂತೆ ಈ ಘಟಕವು ರಚನೆಯಾಗಿದೆಯಾದರೂ ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಿಲ್ಲ. ಜಿಲ್ಲಾ ಮಟ್ಟದಲ್ಲಿ ಡಿ.ಸಿ.ಪಿ.ಯು ಅಡಿಯಲ್ಲಿ ಐ.ಸಿ.ಪಿ.ಎಸ್. ಅಸ್ಥಿತ್ವಕ್ಕೆ ಬಂದಿದೆಯಾದರೂ ಇನ್ನೂ ಸರಿಯಾಗಿ ಕಾರ್ಯ ನಿರ್ವಹಿಸಲು ಆರಂಭಿಸಿಲ್ಲ ಎನ್ನುವುದನ್ನು ಗಮನಿಸಲಾಗಿದೆ. ಹಾಗೆಯೇ ಶೇಕಡಾ ೪೪% ರಷ್ಟು ಸಂಘ ಸಂಸ್ಥೆಯವರ ಅಭಿಪ್ರಾಯದಂತೆ ಈ ಘಟಕಗಳು ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಿವೆ.

**ಕೋಷ್ಟಕ ೪.೨.೭ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ ದೊರಕುವ ಸವಲತ್ತುಗಳ ಮಾಹಿತಿ ಹಾಗೂ ಅವುಗಳ ವಿಲೇವಾರಿಯ ವಿವರ.**

| ಕ್ರ.ಸಂ. | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧. | ಹೌದು | ೨೨ | ೮೮% |
| ೨. | ಇಲ್ಲ | ೩ | ೧೨% |
| | ಒಟ್ಟು | ೨೫ | ೧೦೦% |

ಮೇಲ್ಕಂಡ ಅಂಕಿ ಅಂಶವು (ಕೋಷ್ಟಕ ೪.೨.೭) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ ದೊರಕುವ ಸವಲತ್ತುಗಳ ಮಾಹಿತಿ ಹಾಗೂ ಅವುಗಳ ವಿಲೇವಾರಿಯ ವರ್ಗೀಕರಣವನ್ನು ವಿವರಿಸುತ್ತದೆ. ಶೇಕಡಾ ೮೮% ರಷ್ಟು ಸಂಘ ಸಂಸ್ಥೆಯವರ ಅಭಿಪ್ರಾಯದಂತೆ ಈ ಇಲಾಖೆಗಳಿಂದ ಅಂಗನವಾಡಿ, ಕೆಲವು ತರಬೇತಿಗಳು ಸ್ತ್ರೀ ಶಕ್ತಿ ಬಗ್ಗೆ ಮಾಹಿತಿ ತಿಳಿದಿದೆ. ಅದರೆ ಶೇಕಡಾ ೧೨% ರಷ್ಟು ಸಂಘ ಸಂಸ್ಥೆಯವರ ಅಭಿಪ್ರಾಯದಂತೆ ಈ ಇಲಾಖೆಗಳ ಸವಲತ್ತುಗಳ ವಿಲೇವಾರಿಯಲ್ಲಿ ಸೋತಿದೆ, ಇವುಗಳಲ್ಲಿ ಜನರ ಸಹಭಾಗಿತ್ವ ನಿಜ ಅರ್ಥದಲ್ಲಿ ಇಲ್ಲದಿರುವುದರಿಂದ ವಿಲೇವಾರಿಯಲ್ಲಿ ಕೊರತೆ ಇದೆ ಎನ್ನುವುದನ್ನು ಗಮನಿಸಲಾಗಿದೆ.

**ರೇಖಾಚಿತ್ರ ೪.೨.೨ ಆರೋಗ್ಯ ಸೌಕರ್ಯಗಳು ಮಕ್ಕಳಿಗೆ ಸಮರ್ಪಕವಾಗಿ ದೊರಕುತ್ತಿರುವುದರ ವಿವರ.**




ರೇಖಾಚಿತ್ರ ೪.೨.೨ರಲ್ಲಿ ನಮೂದಿಸಿರುವ ಅಂಕಿ ಅಂಶವು ಆರೋಗ್ಯ ಸೌಕರ್ಯಗಳು ಮಕ್ಕಳಿಗೆ ಸಮರ್ಪಕವಾಗಿ ದೊರಕುತ್ತಿರುವುದರ ವರ್ಗೀಕರಣವನ್ನು ವಿವರಿಸುತ್ತದೆ. ಶೇಕಡಾ ೮೪% ರಷ್ಟು ಸಂಘ ಸಂಸ್ಥೆಯವರ ಅಭಿಪ್ರಾಯದಂತೆ ಆರೋಗ್ಯ ಸೌಕರ್ಯಗಳು ಮಕ್ಕಳಿಗೆ ಸಮರ್ಪಕವಾಗಿ ದೊರಕುತ್ತಿಲ್ಲ. ಯಾಕೆಂದರೆ ಸರಕಾರಿ ಆಸ್ಪತ್ರೆ, ಪ್ರಾಥಮಿಕ ಆರೋಗ್ಯ ಕೇಂದ್ರ ಪಿ.ಎಚ್.ಯು.ಗಳ ಸೌಕರ್ಯಗಳಿಗೆ ನೀಡಿದ ಪ್ರಾಮುಖ್ಯತೆ ಜನರ ಸ್ಪಂದನೆಗೆ ನೀಡಲಾಗುವುದಿಲ್ಲ ಎಂಬುವುದಕ್ಕೆ ಬರಡು ಬಿದ್ದಿರುವ ಸರಕಾರಿ ಕಟ್ಟಡಗಳು ಸಾಕ್ಷಿಯಾಗಿವೆ. ಜನರಿಗೆ ಬೇಕಾದ ಉಚಿತ ವ್ಯವಸ್ಥೆಗಳು, ಪೂರಕ ಸಿಬ್ಬಂದಿಗಳು, ಇಲ್ಲ ಎನ್ನುವುದನ್ನು

ಗಮನಿಸಲಾಗಿದೆ. ಹಾಗೆಯೇ ಶೇಕಡಾ ೧೬ ರಷ್ಟು ಸಂಘ ಸಂಸ್ಥೇಯವರ ಅಭಿಪ್ರಾಯದಂತೆ ಆರೋಗ್ಯ ಸೌಕರ್ಯಗಳು ಮಕ್ಕಳಿಗೆ ದೊರಕುತ್ತಿವೆ.

**ಕೋಷ್ಟಕ ೪.೨.೮ ಮಕ್ಕಳ ಹಕ್ಕುಗಳ ವಿಶೇಷ ಗ್ರಾಮ ಸಭೆಗಳು ಸಮರ್ಪಕವಾಗಿ ನಡೆಯುವುದರ ವಿವರ.**

| ಕ್ರ.ಸಂ. | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧. | ಹೌದು | ೧೦ | ೪೦% |
| ೨. | ಇಲ್ಲ | ೧೫ | ೬೦% |
| | ಒಟ್ಟು | ೨೫ | ೧೦೦% |

ಮೇಲ್ಕಂಡ ಅಂಕಿ ಅಂಶವು (ಕೋಷ್ಟಕ ೪.೨.೮) ಮಕ್ಕಳ ಹಕ್ಕುಗಳ ವಿಶೇಷ ಗ್ರಾಮ ಸಭೆಗಳು ಸಮರ್ಪಕವಾಗಿ ನಡೆಸುವುದರ ವರ್ಗೀಕರಣವನ್ನು ವಿವರಿಸುತ್ತದೆ. ಶೇಕಡಾ ೬೦% ರಷ್ಟು ಸಂಸ್ಥೆಯವರ ಅಭಿಪ್ರಾಯದಂತೆ ಗ್ರಾಮ ಸಭೆಗಳು ಸಮರ್ಪಕವಾಗಿ ನಡೆಯುತ್ತಿಲ್ಲ. ಅದಕ್ಕೆ ರಾಜಕೀಯ ಹಿತಾಸಕ್ತಿಯ ಕೊರತೆಯಿಂದಾಗಿ ಪ್ರಾಮುಖ್ಯತೆ ನೀಡಲಾಗುತ್ತಿಲ್ಲ. ಆದರೆ ಶೇಕಡಾ ೪೦% ರಷ್ಟು ಸಂಘ ಸಂಸ್ಥೆಯವರ ಅಭಿಪ್ರಾಯದಂತೆ ಕೆಲವು ಗ್ರಾಮಗಳಲ್ಲಿ ಎನ್.ಜಿ.ಓ ಗಳ ಮಾರ್ಗದರ್ಶನದಲ್ಲಿ ಗ್ರಾಮಪಂಚಾಯ್ತಿಗಳ ಎಸ್.ಡಿ.ಎಂ.ಸಿ.ಗಳ ಮಾರ್ಗದರ್ಶನದಲ್ಲಿ ಮಕ್ಕಳ ಗ್ರಾಮ ಸಭೆಗಳು ನಡೆಯುತ್ತಿವೆ. ಅದರೆ ಅದಕ್ಕೆ ನಿರೀಕ್ಷಿತ ಫಲಿತಾಂಶ ನಿಗದಿರುವುದನ್ನು ಗಮನಿಸಲಾಗಿದೆ,

**ಕೋಷ್ಟಕ ೪.೨.೯ ಮಕ್ಕಳ ಹಕ್ಕುಗಳ ವಿಶೇಷ ಪೊಲೀಸ್ ಘಟಕ ಉತ್ತಮ ರೀತಿಯಲ್ಲಿ ಕಾರ್ಯನಿರ್ವಹಿಸುವುದರ ವಿವರ.**

| ಕ್ರ.ಸಂ. | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧. | ಹೌದು | ೮ | ೩೨% |
| ೨. | ಇಲ್ಲ | ೧೭ | ೬೮% |
| | ಒಟ್ಟು | ೨೫ | ೧೦೦% |

ಕೋಷ್ಟಕ ೪.೨.೯ರಲ್ಲಿ ನಮೂದಿಸಿರುವ ಅಂಕಿ ಆಂಶವು ಮಕ್ಕಳ ಹಕ್ಕುಗಳ ವಿಶೇಷ ಪೊಲೀಸ್ ಘಟಕ ಉತ್ತಮ ರೀತಿಯಲ್ಲಿ ಕಾರ್ಯನಿರ್ವಹಿಸುವುದರ ವರ್ಗೀಕರಣವನ್ನು ವಿವರಿಸುತ್ತದೆ. ಶೇಕಡಾ ೬೮% ರಷ್ಟು ಸಂಘ ಸಂಸ್ಥೆಯವರ ಅಭಿಪ್ರಾಯದಂತೆ ಉಡುಪಿ ಜಿಲ್ಲೆಯಲ್ಲಿ ವೆಲೋರೆಡ್, ನಮ್ಮ ಭೂಮಿ, ಯುನಿಸೆಫ್ ಹಾಗೂ ಇನ್ನಿತರ ಸ್ವಯಂ ಸೇವಾ ಸಂಸ್ಥೆಗಳ ವತಿಯಿಂದ ಪೊಲೀಸ್ ಇಲಾಖೆಗೆ ಕಳೆದ ೩-೪ ವರ್ಷಗಳಲ್ಲಿ ಕೆಲವು ತರಬೇತಿ/ಸಂವಾದ ಕಾರ್ಯಕ್ರಮಗಳು ನಡೆಯುತ್ತಿವೆಯಾದಾರೂ ಎಸ್.ಜೆ.ಪಿ.ಯು ಸೂಕ್ತ ರೀತಿಯಲ್ಲಿ ರಚಿತವಾಗಿ ಕಾರ್ಯನಿರ್ವಹಿಸುತ್ತಿಲ್ಲ. ಪ್ರತಿ ಪೊಲೀಸ್ ಠಾಣೆಗೆ ಒಬ್ಬರನ್ನು 'ಮಕ್ಕಳ ಸ್ನೇಹಿ ಪೋಲಿಸ್' ಎಂದು

ಗುರುತಿಸಲಾಗಿದೆ. ಶೇಕಡಾ ೩೨% ರಷ್ಟು ಸಂಘ ಸಂಸ್ಥೆಗಳ ಪ್ರಕಾರ ಈ ಘಟಕವು ಉತ್ತಮ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತಿವೆ.

**ಕೋಷ್ಟಕ ೪.೨.೧೦ ಮಕ್ಕಳ ಸಾಗಾಣಿಕೆಯು ಆಗದಂತೆ ಕ್ರಮ ಕೈಗೊಳ್ಳುವುದರ ವಿವರ.**

| ಕ್ರ.ಸಂ. | ವರ್ಗೀಕರಣ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧. | ಹೌದು | ೬ | ೨೪% |
| ೨. | ಇಲ್ಲ | ೧೯ | ೭೬% |
| | ಒಟ್ಟು | ೨೫ | ೧೦೦% |

ಮೇಲ್ಕಂಡ ಅಂಕಿ ಅಂಶವು (ಕೋಷ್ಟಕ ೪.೨.೧೦) ಮಕ್ಕಳ ಸಾಗಾಣಿಕೆಯು ಆಗದಂತೆ ಕ್ರಮ ಕೈಗೊಳ್ಳುವುದರ ವರ್ಗೀಕರವನ್ನು ವಿವರಿಸುತ್ತದೆ. ಶೇಕಡಾ ೭೬% ರಷ್ಟು ಸಂಘ ಸಂಸ್ಥೆಯವರು ಇಲ್ಲ ಎಂದು ಹೇಳಿದ್ದಾರೆ. ಯಾಕೆಂದರೆ ಮಕ್ಕಳ ಸಾಗಾಣಿಕೆಯ ಪರಿಕಲ್ಪನೆ ಜನರಿಗಿಲ್ಲ. ತನ್ನ ಜನ್ಮ ಸ್ಥಾನದಿಂದ ಶಿಕ್ಷಣದ ಉದ್ದೇಶಕ್ಕಲ್ಲದೆ ಬೇರೆ ಯಾವುದೇ ಉದ್ದೇಶಕ್ಕೆ ಬೇರೆ ಊರಿಗೆ ಕಳುಹಿಸುವುದು ಸಾಗಾಣಿಕೆ ಎಂಬ ಜ್ಞಾನ ಜನರಲ್ಲಿ ಇಲ್ಲದಿರುವುದನ್ನು ಗಮನಿಸಲಾಗಿದೆ. ಹಾಗೆಯೇ ಶೇಕಡಾ ೧೬% ರಷ್ಟು ಮಾಹಿತಿದಾರರಿಗೆ ಇದರ ಪರಿಕಲ್ಪನೆ ಗೊತ್ತಿಲ್ಲ. ಶೇಕಡಾ ೮% ರಷ್ಟು ಸಂಘ ಸಂಸ್ಥೆಯವರ ಅಭಿಪ್ರಾಯದಂತೆ ಸಂಬಂಧಪಟ್ಟ ಇಲಾಖೆಗೆ ಮಾಹಿತಿ ತಿಳಿಸುವುದರ ಮೂಲಕ ಕ್ರಮ ಕೈಗೊಳ್ಳಲಾಗುತ್ತಿರುವುದನ್ನು ಗಮನಿಸಲಾಗಿದೆ.

**ರೇಖಾಚಿತ್ರ ೪.೨.೩ ಮಕ್ಕಳ ಹಕ್ಕುಗಳ ಅರಿವಿನ ವಿವರ.**




ಮೇಲ್ಕಂಡ ಅಂಕಿ ಅಂಶವು (ರೇಖಾಚಿತ್ರ ೪.೨.೩) ಮಕ್ಕಳ ಹಕ್ಕುಗಳ ಅರಿವಿನ ವರ್ಗೀಕರಣವನ್ನು ವಿವರಿಸುತ್ತದೆ. ಶೇಕಡಾ ೬೪% ರಷ್ಟು ಸಂಘ ಸಂಸ್ಥೆಯವರ ಅಭಿಪ್ರಾಯದಂತೆ ಕೆಲವು ಸ್ವಯಂ ಸೇವಾ ಸೇವಾ ಸಂಸ್ಥೆಗಳ ಮತ್ತು ಶಾಲಾ ವ್ಯವಸ್ಥೆಯೊಳಗೆ ಈ ಕುರಿತು ಕೆಲವು ಪ್ರಯತ್ನ ನಡೆದಿವೆ. ಹಾಗೆಯೇ ಶೇಕಡಾ ೩೬% ರಷ್ಟು ಸಂಘ ಸಂಸ್ಥೆಯವರ ಅಭಿಪ್ರಾಯದಂತೆ ಮಕ್ಕಳ ಹಕ್ಕಿನ ಅರಿವು ಇಲ್ಲ. ಬೀದಿ ನಾಟಕ, ಮಾಹಿತಿ ಕಾರ್ಯಗಾರ, ಮಕ್ಕಳ ಪಂಚಾಯತ್ ರಚನೆ, ತರಬೇತಿ ಶಿಬಿರಗಳ ಮೂಲಕ ಅರಿವನ್ನು ನೀಡುವ ಪ್ರಯತ್ನ ಮಾಡಲಾಗುತ್ತಿರುವುದು ಅಧ್ಯಯನದಿಂದ ಕಂಡುಬಂದಿದೆ.

# ಅಧ್ಯಾಯ ೫

## ಅಧ್ಯಯನದ ಫಲಿತಗಳು, ಉಪಸಂಹಾರ ಮತ್ತು ಸಲಹೆಗಳು

ಮಕ್ಕಳ ಹಕ್ಕುಗಳು, ಸಮಸ್ಯೆಗಳು ಮತ್ತು ಅಭಿವೃದ್ಧಿಯ ಅಧ್ಯಯನಕ್ಕಾಗಿ ಗ್ರಂಥಗಳು, ಲೇಖನಗಳು, ವರದಿಗಳು, ಗುಂಪು ಚರ್ಚೆಗಳು, ಅವಲೋಕನ ಮತ್ತು ಪೂರ್ವಾಧ್ಯಾಯ ಪರಾಮರ್ಶೆಯ ಮೂಲಕ ವಿಶ್ಲೇಷಣೆ ಮಾಡುವುದರ ಜೊತೆಗೆ ಕ್ಷೇತ್ರಕಾರ್ಯಾಧಾರಿತ ಅಧ್ಯಯನವನ್ನು ಮಾಡಲಾಗಿದೆ. ಪ್ರಸ್ತುತ ಭಾಗ ಅಧ್ಯಯನದ ಕೊನೆಯ ಅಧ್ಯಾಯವಾಗಿರುವುದರಿಂದ ಅಧ್ಯಯನದ ಫಲಿತಗಳು, ಉಪಸಂಹಾರ ಹಾಗೂ ಮುಂದಿನ ಅಧ್ಯಯನಕ್ಕಾಗಿ ಸಲಹೆಗಳನ್ನು ಒಳಗೊಂಡಿದೆ.

- ಅಂಕಿ ಅಂಶಗಳನ್ನು ಗಮನಿಸಿದಾಗ ಶೇಕಡಾ ೬೮% ರಷ್ಟು ಮಾಹಿತಿದಾರರು ಮಹಿಳೆಯರಾಗಿರುವದನ್ನು ಕಂಡುಕೊಳ್ಳಲಾಗಿದೆ.
- ಶೇಕಡಾ ೩೬% ರಷ್ಟು ಮಾಹಿತಿದಾರರು ೩೧–೩೫ ವಯೋಮಾನದ ಗುಂಪಿಗೆ ಸೇರಿದವರಾಗಿದ್ದಾರೆ.
- ಶೇಕಡಾ ೬೦% ರಷ್ಟು ಶಿಕ್ಷಕ ವರ್ಗದವರ ಅಭಿಪ್ರಾಯದಂತೆ ಶಾಲಾ ವಯಸ್ಸಿನ ಎಲ್ಲಾ ಮಕ್ಕಳು ಶಾಲೆಗೆ ಹೋಗುತ್ತಿರುವುದನ್ನು ಅಧ್ಯಯನದಿಂದ ತಿಳಿಯಲಾಗಿದೆ.
- ಶೇಕಡಾ ೫೨% ರಷ್ಟು ಶಿಕ್ಷಕ ವರ್ಗದವರ ಅಭಿಪ್ರಾಯದಂತೆ ಶಾಲೆಗೆ ಸೇರಿದ ಎಲ್ಲಾ ಮಕ್ಕಳು ಕಾನೂನು ಬದ್ಧವಾಗಿ ೧–೮ ನೇ ತರಗತಿಯವರೆಗೆ ನಿರಂತರವಾದ ಕಲಿಕೆಯಿದೆ.
- ಶೇಕಡಾ ೩೬% ರಷ್ಟು ಶಿಕ್ಷಕ ವರ್ಗದವರ ಅಭಿಪ್ರಾಯದಂತೆ ಚಟುವಟಿಕೆ ಆಧಾರಿತ ತರಗತಿಯಿಂದ ಮಕ್ಕಳಲ್ಲಿ ಕಲಿಕಾ ಮಟ್ಟದ ಹೆಚ್ಚಳವಾಗಿರುವುದು ಕಂಡುಬಂದಿದೆ.
- ಶೇಕಡಾ ೯೨% ರಷ್ಟು ಶಿಕ್ಷಕರ ಅಭಿಪ್ರಾಯದಂತೆ ಶಾಲೆಯ ಮಕ್ಕಳ ಅಭಿವೃದ್ಧಿಗಾಗಿ ನಿರ್ದಿಷ್ಟ ಕ್ರಿಯಾ ಯೋಜನೆಯನ್ನು ಶಾಲಾ ಪ್ರಾರಂಭದ ಜೂನ್ ತಿಂಗಳಿನಲ್ಲಿ ವಾರ್ಷಿಕ ಕ್ರಿಯಾ ಯೋಜನೆಯನ್ನು ತಯಾರಿಸುವಾಗ ತೆಗೆದುಕೊಳ್ಳಲಾಗುತ್ತದೆ.
- ಶೇಕಡಾ ೮೮% ರಷ್ಟು ಶಾಲೆಯಲ್ಲಿ ಎಸ್.ಡಿ.ಎಂ.ಸಿ.ಗಳಲ್ಲಿ ಮಕ್ಕಳ ಪ್ರಾತಿನಿಧ್ಯತೆಯಿದೆ.
- ಶೇಕಡಾ ೮೪% ರಷ್ಟು ಶಾಲೆಗಳಲ್ಲಿ ಮಕ್ಕಳ ಹಕ್ಕುಗಳ ಸಂರಕ್ಷಣೆಗಾಗಿ ನಿರ್ಣಯ ತೆಗೆದುಕೊಳ್ಳಲಾಗುತ್ತಿದೆ.
- ಶೇಕಡಾ ೮೮% ರಷ್ಟು ಶಾಲೆಗಳಲ್ಲಿ "ಮೀನಾಕ್ಲಬ್" ವ್ಯವಸ್ಥಿತವಾಗಿ ನಡೆಯುತ್ತಿರುವುದು ಗ್ರಹಿಸಲಾಗಿದೆ.
- ಶೇಕಡಾ ೬೮%ರಷ್ಟು ಶಾಲೆಗಳಲ್ಲಿ ಮಕ್ಕಳ ದೂರು/ಸಲಹಾ ಪಟ್ಟಿಗೆಯನ್ನು ನಿಯಮದಂತೆ ತೆರೆದು ನಿರ್ವಹಣೆ ಮಾಡುವ ವ್ಯವಸ್ಥೆಯಿದೆ.
- ಶೇಕಡಾ ೭೬% ರಷ್ಟು ಮಕ್ಕಳಿಗೆ ತಮ್ಮ ಹಕ್ಕುಗಳ ಬಗ್ಗೆ ಅರಿವಿರುವುದನ್ನು ತಿಳಿಯಲಾಗಿದೆ.

- ಶೇಕಡಾ ೬೦% ರಷ್ಟು ಮಕ್ಕಳೊಂದಿಗೆ ನೇರವಾಗಿ ಕೆಲಸ ಮಾಡುವ ಸಂಘ ಸಂಸ್ಥೆಗಳ ಪ್ರಕಾರ ಉಡುಪಿ ಜಿಲ್ಲೆಯು ಬಾಲ ಕಾರ್ಮಿಕ ಪದ್ಧತಿಯಿಂದ ಮುಕ್ತತೆ ಹೊಂದಿಲ್ಲ.
- ಶೇಕಡಾ ೭೬% ರಷ್ಟು ಸಂಘ ಸಂಸ್ಥೆಯವರ ಪ್ರಕಾರ ಬಾಲ ಕಾರ್ಮಿಕ ಪದ್ಧತಿ ವಿರೋಧಿ ಆಂದೋಲನ ಸಮಿತಿಗಳು ಕಾರ್ಯನಿರ್ವಹಿಸುತ್ತಿದೆ.
- ಶೇಕಡಾ ೮೦% ರಷ್ಟು ಸಂಘ ಸಂಸ್ಥೆಯವರ ಅಭಿಪ್ರಾಯದಂತೆ ಈ ಸಮಿತಿಗಳು ತಿಂಗಳಿಗೊಮ್ಮೆ ಸಭೆ ಸೇರಿ ತಮ್ಮ ಚಟುವಟಿಕೆಗಳನ್ನು ಸಮರ್ಪಕವಾಗಿ ನಿರ್ವಹಿಸುತ್ತಿಲ್ಲ.
- ಶೇಕಡಾ ೬೪% ರಷ್ಟು ಸಂಘ ಸಂಸ್ಥೆಯವರ ಅಭಿಪ್ರಾಯದಂತೆ ಮಕ್ಕಳ ಹಕ್ಕುಗಳ ರಕ್ಷಣಾ ಸಮಿತಿಗಳು ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಿಲ್ಲ.
- ಶೇಕಡಾ ೫೬% ರಷ್ಟು ಸಂಘ ಸಂಸ್ಥೆಯವರ ಅಭಿಪ್ರಾಯದಂತೆ ಸಮಗ್ರ ಮಕ್ಕಳ ರಕ್ಷಣಾ ಘಟಕವು ರಚನೆಯಾಗಿದೆಯಾದರೂ ಸಮರ್ಪಕವಾಗಿ ನಿಜ ಆಶಯದಂತೆ ಕಾರ್ಯ ನಿರ್ವಹಿಸುತ್ತಿಲ್ಲ. ಜಿಲ್ಲಾ ಮಟ್ಟದಲ್ಲಿ ಡಿ.ಸಿ.ಪಿ.ಯು ಅಡಿಯಲ್ಲಿ ಐ.ಸಿ.ಪಿ.ಎಸ್. ಅಸ್ಥಿತ್ವಕ್ಕೆ ಬಂದಿದೆಯಾದರೂ ಇನ್ನೂ ಸರಿಯಾಗಿ ಕಾರ್ಯ ನಿರ್ವಹಿಸಲು ಆರಂಭಿಸಿಲ್ಲ ಎನ್ನುವುದನ್ನು ಗಮನಿಸಲಾಗಿದೆ.
- ಶೇಕಡಾ ೮೮% ರಷ್ಟು ಸಂಘ ಸಂಸ್ಥೆಯವರ ಅಭಿಪ್ರಾಯದಂತೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ ದೊರಕುವ ಸವಲತ್ತುಗಳ (ಅಂಗನವಾಡಿ, ಕೆಲವು ತರಬೇತಿಗಳು, ಸ್ತ್ರೀ ಶಕ್ತಿ) ಬಗ್ಗೆ ಮಾಹಿತಿ ತಿಳಿದಿದೆ.
- ಶೇಕಡಾ ೮೪% ರಷ್ಟು ಸಂಘ ಸಂಸ್ಥೆಯವರ ಅಭಿಪ್ರಾಯದಂತೆ ಆರೋಗ್ಯ ಸೌಕರ್ಯಗಳು ಮಕ್ಕಳಿಗೆ ಸಮರ್ಪಕವಾಗಿ ದೊರಕುತ್ತಿಲ್ಲ.
- ಶೇಕಡಾ ೬೦% ರಷ್ಟು ಸಂಘ ಸಂಸ್ಥೆಯವರ ಅಭಿಪ್ರಾಯದಂತೆ ಮಕ್ಕಳ ಹಕ್ಕುಗಳ ವಿಶೇಷ ಗ್ರಾಮ ಸಭೆಗಳು ಸಮರ್ಪಕವಾಗಿ ನಡೆಯುತ್ತಿಲ್ಲ. ಅದಕ್ಕೆ ರಾಜಕೀಯ ಹಿತಾಸಕ್ತಿಯ ಕೊರತೆಯಿಂದಾಗಿ ಪ್ರಾಮುಖ್ಯತೆ ನೀಡಲಾಗುತ್ತಿಲ್ಲ.
- ಶೇಕಡಾ ೬೮% ರಷ್ಟು ಸಂಘ ಸಂಸ್ಥೆಯವರ ಅಭಿಪ್ರಾಯದಂತೆ ಉಡುಪಿ ಜಿಲ್ಲೆಯಲ್ಲಿ ವೆಲೋರೆಡ್, ನಮ್ಮ ಭೂಮಿ, ಯುನಿಸೆಫ್ ಹಾಗೂ ಇನ್ನಿತರ ಸ್ವಯಂ ಸೇವಾ ಸಂಸ್ಥೆಗಳ ವತಿಯಿಂದ ಪೊಲೀಸ್ ಇಲಾಖೆಗೆ ಕಳೆದ ೩–೪ ವರ್ಷಗಳಿಂದ ಕೆಲವು ತರಬೇತಿ/ಸಂವಾದ ಕಾರ್ಯಕ್ರಮಗಳು ನಡೆಯುತ್ತಿವೆಯಾದಾರೂ ಎಸ್.ಜೆ.ಪಿ.ಯು. ಸೂಕ್ತ ರೀತಿಯಲ್ಲಿ ರಚಿತವಾಗಿ ಕಾರ್ಯನಿರ್ವಹಿಸುತ್ತಿಲ್ಲ.
- ಶೇಕಡಾ ೭೬% ರಷ್ಟು ಸಂಘ ಸಂಸ್ಥೆಯವರು ಮಕ್ಕಳ ಸಾಗಾಣಿಕೆಯು ಆಗದಂತೆ ಕ್ರಮ ಕೈಗೊಳ್ಳಲಾಗುತ್ತಿಲ್ಲ ಎಂದು ಹೇಳಿದ್ದಾರೆ. ಯಾಕೆಂದರೆ ಮಕ್ಕಳ ಸಾಗಾಣಿಕೆಯ ಪರಿಕಲ್ಪನೆ ಜನರಿಗಿಲ್ಲ. ತನ್ನ

ಜನ್ಮ ಸ್ಥಾನದಿಂದ ಶಿಕ್ಷಣದ ಉದ್ದೇಶಕ್ಕಲ್ಲದೆ ಬೇರೆ ಯಾವುದೇ ಉದ್ದೇಶಕ್ಕೆ ಬೇರೆ ಊರಿಗೆ ಕಳುಹಿಸುವುದು ಸಾಗಾಣಿಕೆ ಎಂಬ ಜ್ಞಾನ ಜನರಲ್ಲಿ ಇಲ್ಲದಿರುವುದನ್ನು ಗಮನಿಸಲಾಗಿದೆ.

ಈ ಮೇಲ್ಕಂಡ ವಿಷಯಗಳ ಆಧಾರದ ಮೇಲೆ ವಿಶ್ಲೇಷಿಸುವುದಾದರೆ, ಪ್ರಸ್ತುತ ಉಡುಪಿ ಜಿಲ್ಲೆಯಲ್ಲಿ ಮಕ್ಕಳ ಅಭಿವೃದ್ಧಿಗೆ ಪೂರಕವಾಗಿರುವ ಮಕ್ಕಳ ಹಕ್ಕುಗಳ ಕಾನೂನುಬದ್ಧ ವ್ಯವಸ್ಥೆಗಳು ಇದ್ದರೂ ಕೂಡ ಅವುಗಳು ನಿರೀಕ್ಷಿತ ಮಟ್ಟದಲ್ಲಿ ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುವಲ್ಲಿ ಸೋತಿರುವುದನ್ನು ಗಮನಿಸಲಾಗಿದೆ. ಇದಕ್ಕೆ ಸಂಬಂಧಪಟ್ಟ ಇಲಾಖೆ, ಸಮಿತಿಗಳು, ಸದಸ್ಯರುಗಳಿಗೆ ಇರುವ ಮಾಹಿತಿಯ ಕೊರತೆ, ತರಬೇತಿಯ ಕೊರತೆ, ಅಧ್ಯಯನ ಸಾಮಾಗ್ರಿಯ ಕೊರತೆ ಇತ್ಯಾದಿಗಳು ಕಾರಣವಾಗಿದೆ. ಹಾಗೆಯೇ ಜನರಲ್ಲಿಯೂ ಕೂಡ ಈ ಎಲ್ಲಾ ವ್ಯವಸ್ಥೆಗಳ ಅರಿವಿನ ಕೊರತೆಯಿಂದಾಗಿ ಜನರ ಭಾಗವಹಿಸುವಿಕೆಯು ಕೂಡ ತಳಮಟ್ಟದಲ್ಲಿರುವುದನ್ನು ಗಮನಿಸಲಾಗಿದೆ. ಈ ನಿಟ್ಟಿನಲ್ಲಿ ಮುಂದಿನ ವಿಭಾಗದಲ್ಲಿ ಸಲಹೆ ಸೂಚನೆಗಳನ್ನು ನೀಡಲಾಗಿದೆ.

## ಉಪಸಂಹಾರ:

ಮಕ್ಕಳ ಹಕ್ಕುಗಳು, ಸಮಸ್ಯೆಗಳು ಮತ್ತು ಅಭಿವೃದ್ಧಿ : ಉಡುಪಿ ಜಿಲ್ಲೆಯ ಒಂದು ಅಧ್ಯಯನವು ನೇರವಾಗಿ ಸಂದರ್ಶನ ನಡೆಸಿ ಪ್ರಸ್ತುತ ಪಡಿಸಿದ ಅಧ್ಯಯನವಾಗಿದೆ. ಉಡುಪಿ ಜಿಲ್ಲೆಯಲ್ಲಿನ ಎಲ್ಲಾ ಮಕ್ಕಳು ಕಾನೂಬದ್ಧವಾಗಿ ಒಂದರಿಂದ ರಿಂದ ಎಂಟನೆಯ ತರಗತಿಯವರೆಗೆ ಶಾಲೆಗೆ ಹೋಗುತ್ತಿದ್ದಾರೆ. ಉಡುಪಿ ಜಿಲ್ಲೆಯ ಬಡವರ ಮಕ್ಕಳು ಹೆತ್ತವರ ಜೊತೆ ಕೆಲಸದಲ್ಲಿ ಕೈ ಜೋಡಿಸುತ್ತಾರೆ. ಉಡುಪಿ ಜಿಲ್ಲೆಗೆ ವಲಸೆ ಬರುವ ಕಾರ್ಮಿಕರ ಸಂಖ್ಯೆ ಹೆಚ್ಚಿದ್ದು, ಇವರ ಮಕ್ಕಳು ಕೂಲಿ ಕೆಲಸ ಹಾಗೂ ಭಿಕ್ಷಾಟನೆಯಲ್ಲಿ ತೊಡಗಿರುವುದನ್ನು ಗಮನಿಸಲಾಗಿದೆ. ವಲಸೆ ಕಾರ್ಮಿಕರ ಮಕ್ಕಳಿಗಾಗಿ ಈಗ ಪ್ರತಿಯೊಂದು ಸರ್ಕಾರಿ ಶಾಲೆಯಲ್ಲಿ ತಾತ್ಕಾಲಿಕ ಹಾಜರಾತಿಯ ವ್ಯವಸ್ಥೆಯಿದೆ. ಇದರಲ್ಲಿ ವಲಸೆ ಹೋಗುವವರ ಹಾಗೂ ವಲಸೆ ಬರುವವರ ಮಕ್ಕಳ ಹಾಜರಾತಿ ಇರುತ್ತದೆ. ವಲಸೆ ಕಾರ್ಮಿಕರು ವರ್ಷ ವರ್ಷಕ್ಕೆ ತಮ್ಮ ವಾಸ್ತವ್ಯವನ್ನು ಬದಲಾಯಿಸುವುದರಿಂದ ಉಡುಪಿ ಜಿಲ್ಲೆಯಲ್ಲಿನ ಒಟ್ಟು ಮಕ್ಕಳಲ್ಲಿ ಈ ಮಕ್ಕಳು ಬರುವುದರಿಂದ ನಿರಂತರ ಕಲಿಕೆಯಿಲ್ಲ ಎಂಬುದನ್ನು ಗಮನಿಸಲಾಗಿದೆ.

ಶಾಲೆಗಳಲ್ಲಿ ಚಟುವಟಿಕೆ ಆಧಾರಿತ ತರಗತಿಗಳನ್ನು ನಡೆಸುವುದರಿಂದ ಮಕ್ಕಳಲ್ಲಿ ಕಲಿಕೆಯ ಮಟ್ಟ, ಭಾಗವಹಿಸುವಿಕೆಯ ಮಟ್ಟ, ಹಾಜರಾತಿಯಲ್ಲಿನ ಹೆಚ್ಚಳ, ಶಿಕ್ಷಕರು ಮತ್ತು ಮಕ್ಕಳ ನಡುವಿನ ಅಂತರ ಕಡಿಮೆಯಾಗಿದೆ. ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಗಳು ಮಕ್ಕಳ ಅಭಿವೃದ್ಧಿಗೆ ಪೂರಕವಾಗಿ ಅಭಿವೃದ್ಧಿ ಯೋಜನೆಗಳನ್ನು ತೆಗೆದುಕೊಳ್ಳುತ್ತಿವೆ. ಮಕ್ಕಳ ಹಕ್ಕುಗಳ ವಿಶೇಷ ಗ್ರಾಮಸಭೆಗಳು ಗ್ರಾಮೀಣ ಮಟ್ಟದಲ್ಲಿ ನಡೆಯುತ್ತಿವೆಯಾದರೂ ರಾಜಕೀಯ ಒತ್ತಡದಿಂದಾಗಿ ಅಷ್ಟೊಂದು ಪರಿಣಾಮಕಾರಿಯಾಗಿ ನಡೆಯುತ್ತಿಲ್ಲ.

ಉಡುಪಿ ಜಿಲ್ಲೆಯೂ ಬಾಲ ಕಾರ್ಮಿಕ ಪದ್ಧತಿ ಇರುವುದನ್ನು ಗಮನಿಸಲಾಗಿದೆ. ಹಾಗೆಯೇ ಭಿಕ್ಷಾಟನೆಯಲ್ಲಿ ತೊಡಗಿರುವ ಮಕ್ಕಳನ್ನು ಹೆಚ್ಚಾಗಿ ಉಡುಪಿ ಜಿಲ್ಲೆಯ ಕುಂದಾಪುರ, ಬ್ರಹ್ಮಾವರ, ಉಡುಪಿ ತಾಲ್ಲೂಕುಗಳಲ್ಲಿ ನೋಡಬಹುದು. ಅದು ಇತರ ಕಡೆಯಿಂದ ವಲಸೆ ಬರುವ ಜನರಿಂದಾಗಿದೆ. ಜನರಿಗೆ ಅರಿವಿನ ಕೊರತೆಯಿದ್ದು ಅವರಿಗೆ ಮಕ್ಕಳ ಹಕ್ಕುಗಳ ಬಗ್ಗೆ ತಿಳಿದಿಲ್ಲ. ಮಕ್ಕಳು ಅಸುರಕ್ಷತೆಯಲ್ಲಿರುವುದರಿಂದ ಪಾಲಕರಿಗೆ/

ಪೋಷಕರಿಗೆ ಅರಿವಿನ ಕೊರತೆ, ಕೆಲಸಗಾರರ ಕೊರತೆಯಿಂದ, ಕಡಿಮೆ ಸಂಬಳದ ಸಾಧ್ಯತೆ, ಹೆಚ್ಚು ಹೊತ್ತು ಕೆಲಸ ಹಾಗೂ ಇವುಗಳನ್ನೇಲ್ಲಾ ಕಾಣುವುದು ವಲಸೆ ಬಂದ ಜನರಿಂದ ಹಾಗೂ ಇವರ ಮಕ್ಕಳು ಬಾಲ ಕಾರ್ಮಿಕತೆ ಹಾಗೂ ಭಿಕ್ಷಾಟನೆಯಲ್ಲಿ ತೊಡಗಿರುವುದನ್ನು ಗಮನಿಸಲಾಗಿದೆ.

ಉಡುಪಿ ಜಿಲ್ಲೆಯಲ್ಲಿ ಮಕ್ಕಳ ಹಕ್ಕುಗಳ ಕಾನೂನುಬದ್ಧ ವ್ಯವಸ್ಥೆಗಳಾದ ಮಕ್ಕಳ ಕಲ್ಯಾಣ ಸಮಿತಿ, ಬಾಲ ನ್ಯಾಯ ಮಂಡಳಿ, ಬಾಲ ಕಾರ್ಮಿಕ ಪದ್ದತಿ ವಿರೋಧಿ ಅಂದೋಲನ ಸಮಿತಿಗಳು, ಮಕ್ಕಳ ಹಕ್ಕುಗಳ ರಕ್ಷಣಾ ಸಮಿತಿಗಳು, ಸಮಗ್ರ ಮಕ್ಕಳ ರಕ್ಷಣಾ ಘಟಕ, ಮಕ್ಕಳ ಹಕ್ಕುಗಳ ವಿಶೇಷ ಪೊಲೀಸ್ ಘಟಕಗಳು ಇತ್ಯಾದಿಗಳು ಸಮರ್ಪಕವಾಗಿ ನಿರೀಕ್ಷಿತ ಮಟ್ಟದಲ್ಲಿ ಕಾರ್ಯನಿರ್ವಹಿಸದುವಲ್ಲಿ ಸೋತಿದೆ. ಯಾಕೆಂದರೆ ಇವುಗಳಿಗೆ ಬೇಕಾದ ಮೂಲಭೂತ ಸೌಕರ್ಯಗಳಾದ ಕಟ್ಟಡದ ಕೊರತೆ, ಅಂತರ್ ಜಾಲದ ಕೊರತೆ, ರಾಜಕೀಯ ಒತ್ತಡ, ಇಲಾಖೆಗಳೊಡನೆ ಸಂಯೋಜನೆ, ಇಲಾಖೆಯಿಂದ ಪೂರಕ ಸಹಕಾರವಿಲ್ಲದಿರುವುದು, ಪೂರಕ ಅಂಕಿ ಅಂಶಗಳ, ಮಾಹಿತಿಗಳ ಕ್ರೋಡೀಕರಣ ಇಲ್ಲದಿರುವುದು, ಪರಿಕಲ್ಪನಾತ್ಮಕ ನಿಖರತೆ ಇಲ್ಲದಿರುವುದು, ಬದಲಾಗುತ್ತಿರುವ ನೀತಿಗಳು ಇತ್ಯಾದಿಗಳಿಂದ ಸಾಧ್ಯವಾಗಿಲ್ಲ. ಉಡುಪಿ ಜಿಲ್ಲೆಯಲ್ಲಿ ಮಕ್ಕಳ ಸಹಾಯವಾಣಿ ೧೦೯೮ಲನ್ನು ನಡೆಸಲು ಯಾವುದೇ ಸಂಘ ಸಂಸ್ಥೆ ಮುಂದೆ ಬರುತ್ತಿಲ್ಲ.

ಮಕ್ಕಳ ಹಕ್ಕುಗಳ ಪರಿಕಲ್ಪನೆಯು ಮಕ್ಕಳ ಅಭಿವೃದ್ಧಿಗೆ ಒಂದು ಪೂರಕವಾದ ಸಾಧನವಾಗಿದೆ. ಈ ನಿಟ್ಟಿನಲ್ಲಿ ರಾಜ್ಯ ಸರಕಾರವು ಮಕ್ಕಳ ಹಕ್ಕುಗಳಿಗೆ ಬೇಕಾದ ಕಾನೂನುಬದ್ಧ ವ್ಯಸ್ಥೆಗಳನ್ನು ಪ್ರತಿಯೊಂದು ಜಿಲ್ಲೆಗಳಲ್ಲಿ ಮಾಡಿವೆ. ಪ್ರತಿಯೊಬ್ಬರು ಈ ವ್ಯವಸ್ಥೆಯ ಅರಿವನ್ನು ಹೊಂದಿ ಮಕ್ಕಳ ಅಭಿವೃದ್ಧಿಗಾಗಿ ಶ್ರಮಿಸಬೇಕು. ಆ ಮೂಲಕ ದೇಶದ ಅಭಿವೃದ್ಧಿಯನ್ನು ಸಾಧಿಸಬಹುದಾಗಿದೆ. ಒಂದು ದೇಶ ಅಭಿವೃದ್ಧಿಯತ್ತ ಸಾಗುತ್ತಿದೆಯೋ ಅಥವಾ ಇಲ್ಲವೋ ಎಂದು ಅಲ್ಲಿನ ಮಕ್ಕಳ ಸ್ಥಿತಿಯನ್ನು ನೋಡಿ ತಿಳಿದುಕೊಳ್ಳಬಹುದು. ಇಂದಿನ ಮಕ್ಕಳೆ ಇಂದಿನ ಪ್ರಜೆಗಳು ಎಂಬುದನ್ನು ನಾವು ಯಾರೂ ಮರೆಯದೆ, ಮಕ್ಕಳಿಗೆ ಬೇಕಾದ ಬದುಕುವ, ರಕ್ಷಣೆಯ, ಅಭಿವೃದ್ಧಿ ಹೊಂದುವ ಹಾಗೂ ಭಾಗವಹಿಸುವ ಹಕ್ಕನ್ನು ನೀಡುವ ಕರ್ತವ್ಯ ನಮ್ಮದಾಗಬೇಕಾಗಿರುವುದು ಅಗತ್ಯವಾಗಿದೆ. ಹೀಗೆ ಮಕ್ಕಳ ಅಭಿವೃದ್ಧಿಯ ಮೂಲಕ ದೇಶದ ಅಭಿವೃದ್ಧಿಯ ಕಡೆ ಗಮನಹರಿಸುವ ಹೆಚ್ಚಿನ ಅಗತ್ಯತೆಗಳಿವೆ.

## ಮುಂದಿನ ಅಧ್ಯಯನಕ್ಕಾಗಿ ಸಲಹೆಗಳು:

ಒಂದು ಅಧ್ಯಯನದಲ್ಲಿ ಆಯ್ದುಕೊಂಡ ವಿಷಯದ ಬಗ್ಗೆ ಹೊಸ ವಿಷಯಗಳನ್ನು ತಿಳಿಯುವ ಪ್ರಯತ್ನ ಮಾಡಲಾಗುತ್ತದೆ. ಹಾಗೆಯೇ ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಮುಂದಿನ ಅಧ್ಯಯನಗಳ/ಸಂಶೋಧನೆಗಳ ಸಾಧ್ಯತೆಯ ಬಗ್ಗೆಯೂ ಹೇಳಬಹುದಾಗಿದೆ. ಈ ನಿಟ್ಟಿನಲ್ಲಿ ಉಡುಪಿ ಜಿಲ್ಲೆಯಲ್ಲಿ ಅಧ್ಯಯನ ನಡೆಸಿ ಲಭಿಸಿರುವ ಫಲಿತಗಳೂ ಹಾಗೂ ಅವಲೋಕನ ವಿಧಾನದ ಆಧಾರದ ಮೇಲೆ ಈ ಕೆಳಕಂಡ ಮುಂದಿನ ಅಧ್ಯಯನಕ್ಕಾಗಿ ಸಲಹೆ ಸೂಚನೆಗಳನ್ನು ನೀಡಲಾಗಿದೆ.

- ಮಕ್ಕಳ ಹಕ್ಕುಗಳ ಬಗ್ಗೆ ಅಧ್ಯಯನ ಮಾಡುವವರಿಗೆ ಶಿಕ್ಷಣ ಇಲಾಖೆ, ಸಮಿತಿಗಳಿಂದ ಸೂಕ್ತ ರೀತಿಯ ಸಹಕಾರ ದೊರಕುವ ಕುರಿತು ಮೌಲ್ಯಮಾಪನ ಅಧ್ಯಯನ ಮಾಡುವ ಅವಕಾಶಗಳಿವೆ.
- ಮಕ್ಕಳೊಂದಿಗೆ ಕೆಲಸ ಮಾಡುವ ಸಂಘ ಸಂಸ್ಥೆಗಳು ಮಕ್ಕಳ ಹಕ್ಕುಗಳ ಬಗ್ಗೆ ಸಮುದಾಯದಲ್ಲಿ ಅರಿವನ್ನು ಮೂಡಿಸುವವಂತಹ ಹಾಗೆಯೇ ಪರಿಣಾಮಕಾರಿಯಾದ ಸಮುದಾಯದ ಸಹಭಾಗಿತ್ವವಾಗುವಂತಹ ಅಧ್ಯಯನವನ್ನು ಕೈಗೊಳ್ಳುವ ಸಾಧ್ಯತೆಯಿದೆ.
- ಮಕ್ಕಳ ಹಕ್ಕುಗಳ ಕಾನೂನುಬದ್ಧ ವ್ಯವಸ್ಥೆಗಳು ಸಮರ್ಪಕವಾಗಿ ಕಾರ್ಯನಿರ್ವಹಿಸಲು ರಾಜ್ಯ ಸರಕಾರವು ಮಕ್ಕಳ ಸಹಾಯವಾಣಿ, ಅಂತರ್‌ಜಾಲ, ಸಮಿತಿಗಳಿಗೆ ಬೇಕಾದ ಕಟ್ಟಡ ಮುಂತಾದ ಮೂಲಭೂತ ಸೌಕರ್ಯಗಳನ್ನು ಒದಗಿಸುವ ಕುರಿತು ಮೌಲ್ಯಮಾಪನ ಅಧ್ಯಯನ ಮಾಡುವ ಅವಕಾಶಗಳಿವೆ.
- ಪರಿಶಿಷ್ಟ ಜಾತಿ, ಪಂಗಡ ಅಥವಾ ಯಾವಯದೇ ಒಂದು ಸಮುದಾಯದ ಮೇಲೆ ಬೆಳಕು ಚೆಲ್ಲಿ ಅಧ್ಯಯನವನ್ನು ನಡೆಸಬಹುದಾಗಿದೆ.
- ಹೆಚ್ಚಿನ ಮಾಹಿತಿಗಾಗಿ ತುಲನಾತ್ಮಕ ಅಧ್ಯಯನ ಮಾಡಬಹುದಾಗಿದೆ.
- ಇದೇ ಅಧ್ಯಯನವನ್ನು ಇನ್ನೂ ಹೆಚ್ಚಿನ ಅವಧಿಗೆ ವಿಸ್ತರಿಸಿದರೆ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಆರೋಗ್ಯ ಇನ್ನಿತರ ಸಮಸ್ಯೆಗಳ ಬಗ್ಗೆ ವಿಸ್ತಾರವಾಗಿ ತಿಳಿದುಕೊಳ್ಳಬಹುದು.

## ಮಕ್ಕಳ ಹಕ್ಕುಗಳು, ಸಮಸ್ಯೆಗಳು ಮತ್ತು ಅಭಿವೃದ್ಧಿ : ಉಡುಪಿ ಜಿಲ್ಲೆಯ ಒಂದು ಅಧ್ಯಯನ.

### *ಪ್ರಶ್ನಾವಳಿ 1*

*(ಶಾಲೆಯ ಮೂಲದಿಂದ ತೆಗೆದುಕೊಂಡ ಮಾಹಿತಿದಾರರಿಗೆ)*

**ಮಾನ್ಯರೇ,**

ನಾನು, ಪ್ರತಿಮ, ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಂಯೋಜನೆ ಹೊಂದಿದ, ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ, ಬಲ್ಮಠ, ಮಂಗಳೂರು ಇದರ ಎಂ.ಫಿಲ್ ವಿದ್ಯಾರ್ಥಿನಿಯಾಗಿದ್ದು, *"ಮಕ್ಕಳ ಹಕ್ಕುಗಳು, ಸಮಸ್ಯೆಗಳು ಮತ್ತು ಅಭಿವೃದ್ಧಿ : ಉಡುಪಿ ಜಿಲ್ಲೆಯ ಒಂದು ಅಧ್ಯಯನ"* ಎಂಬ ವಿಷಯದ ಕುರಿತು ಎಂ.ಫಿಲ್ ಪದವಿಗಾಗಿ ಸಂಶೋಧನಾ ಅಧ್ಯಯನ ನಡೆಸುತ್ತಿದ್ದೇನೆ. ಆದ್ದರಿಂದ ಈ ಪ್ರಶ್ನಾವಳಿಯನ್ನು ಉತ್ತರಿಸಿ ಮಾಹಿತಿಯನ್ನು ಒದಗಿಸಬೇಕೆಂದು ವಿನಂತಿಸಿಕೊಳ್ಳುತ್ತೇನೆ. ಹಾಗೆಯೇ ತಾವು ನೀಡಿದ ಮಾಹಿತಿಯನ್ನು ಗೌಪ್ಯವಾಗಿ ಇಡಲಾಗುವುದು ಮತ್ತು ಕೇವಲ ಶೈಕ್ಷಣಿಕ ಉದ್ದೇಶಕ್ಕಾಗಿ ಬಳಸಿಕೊಳ್ಳಲಾಗುವುದು. ಕೃತಜ್ಞತೆಗಳು.

1) ವೈಯಕ್ತಿಕ ವಿವರ :
ಹೆಸರು : ಲಿಂಗ: ವಯಸ್ಸು:
ಪದನಾಮ :
ಪೂರ್ಣ ವಿಳಾಸ :

ದೂರವಾಣಿ ಸಂಖ್ಯೆ :

2) ನಿಮ್ಮ ಗ್ರಾಮ/ನಗರದಲ್ಲಿ ಶಾಲಾ ವಯಸ್ಸಿನ ಎಲ್ಲಾ ಮಕ್ಕಳು ಶಾಲೆಗೆ ಹೋಗುತ್ತಿದ್ದಾರೆಯೇ?
ಅ) ಹೌದು ಆ) ಇಲ್ಲ

3) ಇಲ್ಲವಾದರೆ ಕಂಡುಕೊಂಡ ಕಾರಣವನ್ನು ತಿಳಿಸಿರಿ.

4) ನಿಮ್ಮ ಗ್ರಾಮ/ನಗರದ ಶಾಲೆಗೆ ಸೇರಿದ ಎಲ್ಲಾ ಮಕ್ಕಳು ಕಾನೂನುಬದ್ಧವಾಗಿ ಒಂದರಿಂದ ಎಂಟನೇ ತರಗತಿಯವರೆಗೆ ನಿರಂತರವಾಗಿ ಕಲಿಯುತ್ತಿದ್ದಾರೆಯೇ?
ಅ) ಹೌದು ಆ) ಇಲ್ಲ

5) ಇಲ್ಲವಾದರೆ ವಿವರ ನೀಡಿರಿ.

6) ನಿಮ್ಮ ಗ್ರಾಮ/ನಗರದ ಶಾಲೆಗಳಲ್ಲಿ ಚಟುವಟಿಕೆ ಆಧಾರಿತ ತರಗತಿಗಳಿಂದ ವಿಧ್ಯಾರ್ಥಿಗಳಗೆ ಯಾವ ರೀತಿಯ ಪ್ರಯೋಜನಗಳಾಗಿವೆ?
ಅ) ಕಲಿಕಾ ಮಟ್ಟದ ಹೆಚ್ಚಳ
ಆ) ಭಾಗವಹಿಸುವಿಕೆಯ ಹೆಚ್ಚಳ
ಇ) ಹಾಜರಾತಿಯಲ್ಲಿನ ಹೆಚ್ಚಳ
ಈ) ಶಿಕ್ಷಕರ–ವಿಧಾರ್ಥಿಗಳ ಅಂತರ ಕಡಿಮೆಯಾಗಿದೆ.
ಉ) ಇತರ ಯಾವುದಾದರು.

7) ನಿಮ್ಮ ಗ್ರಾಮ/ನಗರದ ಶಾಲೆಗಳಲ್ಲಿ ಸರಿಯಾದ ಪ್ರಮಾಣದಲ್ಲಿ ಶಿಕ್ಷಕರಿದ್ದಾರೆಯೇ?

ಅ) ಹೌದು ಆ) ಇಲ್ಲ

8) ನಿಮ್ಮ ಗ್ರಾಮ/ನಗರದ ಶಾಲೆಗಳಲ್ಲಿ ಗಂಡು ಹಾಗೂ ಹೆಣ್ಣು ಮಕ್ಕಳಿಗೆ ಯೋಗ್ಯ ಶೌಚಾಲಯಗಳಿವೆಯೇ?

ಅ) ಹೌದು ಆ) ಇಲ್ಲ

9) ನಿಮ್ಮ ಶಾಲೆಗಳಲ್ಲಿ ಮಕ್ಕಳಿಗೆ ಕುಡಿಯಲು ಯೋಗ್ಯವಾದ ನೀರಿನ ವ್ಯವಸ್ಥೆ ಇದೆಯೇ?

ಅ) ಹೌದು ಆ) ಇಲ್ಲ

10) ಇಲ್ಲವಾದರೆ ಕಾರಣ ತಿಳಿಸಿರಿ.

11) ನಿಮ್ಮ ಗ್ರಾಮ/ನಗರದ ಶಾಲೆಗಳಲ್ಲಿ ಆಟದ ಮೈದಾನ ಇದೆಯೇ?

ಅ) ಹೌದು ಆ) ಇಲ್ಲ

12) ಇಲ್ಲವಾದರೆ ಕಾರಣ ತಿಳಿಸಿರಿ.

13) ನಿಮ್ಮ ಗ್ರಾಮ/ನಗರದ ಶಾಲೆಯ ಎಸ್.ಡಿ.ಎಮ್.ಸಿ.ಗಳು ವ್ಯವಸ್ಥಿತವಾಗಿ ಕಾರ್ಯನಿರ್ವಹಿಸುತ್ತಿದೆಯೇ?

ಅ) ಹೌದು ಆ) ಇಲ್ಲ

14) ಹೌದಾದರೆ ಎಸ್.ಡಿ.ಎಮ್.ಸಿ.ಗಳು ನಡೆಸಿದ ಕಾರ್ಯವನ್ನು ತಿಳಿಸಿರಿ.

15) ಇಲ್ಲವಾದರೆ ವಿವರಣೆ ನೀಡಿರಿ.

16) ನಿಮ್ಮ ಗ್ರಾಮ/ನಗರದ ಶಾಲೆಯ ಮಕ್ಕಳ ಅಭಿವೃದ್ಧಿಗಾಗಿ ನಿರ್ದಿಷ್ಟ ಯೋಜನೆಗಳಿವೆಯೇ?

ಅ) ಹೌದು ಆ) ಇಲ್ಲ

17) ಹೌದಾದಲ್ಲಿ ಅದನ್ನು ಯಾರು ಮತ್ತು ಯಾವಾಗ ತಯಾರಿಸುತ್ತಾರೆ?

18) ನಿಮ್ಮ ಗ್ರಾಮ/ನಗರದ ಶಾಲೆಯ ಎಸ್.ಡಿ.ಎಮ್.ಸಿ.ಗಳಲ್ಲಿ ಮಕ್ಕಳಿಗೆ ಪ್ರಾತಿನಿಧ್ಯ ನೀಡಲಾಗುತ್ತಿದೆಯೇ?

ಅ) ಹೌದು ಆ) ಇಲ್ಲ

19) ನಿಮ್ಮ ಗ್ರಾಮ/ನಗರದ ಶಾಲೆಗಳಲ್ಲಿ ನಡೆಯುವ ಎಲ್ಲಾ ಕಾರ್ಯಕ್ರಮಗಳಲ್ಲಿ ಲಿಂಗ ಸಮಾನತೆಯನ್ನು ಪಾಲಿಸಲಾಗುತ್ತಿದೆಯೇ?

ಅ) ಹೌದು ಆ) ಇಲ್ಲ

20) ಹೌದಾದರೆ ವಿವರಣೆ ನೀಡಿರಿ.

21) ನಿಮ್ಮ ಗ್ರಾಮ/ನಗರದ ಶಾಲೆಗಳಲ್ಲಿ ಮಕ್ಕಳ ಸಾಮರ್ಥ್ಯವನ್ನು ಗುರುತಿಸಬಲ್ಲ ಮೌಲ್ಯಮಾಪನ ನಡೆಯುತ್ತಿದೆಯೇ?

ಅ) ಹೌದು ಆ) ಇಲ್ಲ

22) ನಿಮ್ಮ ಗ್ರಾಮ/ನಗರದ ಶಾಲೆಗಳಲ್ಲಿ ಎಲ್ಲಾ ವಿಷಯಗಳಲ್ಲಿ ಪರಿಣಿತ ಮತ್ತು ಕಾಳಜಿಯಿರುವ ಶಿಕ್ಷಕರಿದ್ದಾರೆಯೇ?

ಅ) ಹೌದು ಆ) ಇಲ್ಲ

23) ನಿಮ್ಮ ಗ್ರಾಮ/ನಗರದ ಶಾಲೆಗಳಲ್ಲಿ ಮಕ್ಕಳ ಅಭಿವೃದ್ಧಿಯ ಬಗ್ಗೆ ಚರ್ಚೆಗಳು ನಡೆಯುತ್ತಿದೆಯೇ?

ಅ) ಹೌದು ಆ) ಇಲ್ಲ

24) ಹೌದಾದಲ್ಲಿ ಯಾರು, ಯಾವಾಗ, ಎಷ್ಟು ಸಮಯಕ್ಕೊಮ್ಮೆ ಚರ್ಚೆ ನಡೆಸುತ್ತಾರೆ?

25) ನಿಮ್ಮ ಗ್ರಾಮ/ನಗರದ ಶಾಲೆಗಳಲ್ಲಿ ಮಕ್ಕಳ ಹಕ್ಕುಗಳ ಸಂರಕ್ಷಣೆಗಾಗಿ ನಿರ್ಣಯಗಳನ್ನು ತೆಗೆದುಕೊಂಡಿದ್ದಾರೆಯೇ?

ಅ) ಹೌದು ಆ) ಇಲ್ಲ

26) ಹೌದಾದಲ್ಲಿ ಯಾರು, ಯಾವಾಗ ತೆಗೆದುಕೊಳ್ಳುತ್ತಾರೆ?

27) ನಿಮ್ಮ ಗ್ರಾಮ/ನಗರದ ಶಾಲೆಗಳಲ್ಲಿ 'ಮಕ್ಕಳ ಹಕ್ಕುಗಳ ಕೋಶ' ವ್ಯವಸ್ಥಿತವಾಗಿ ನಡೆಯುತ್ತಿವೆಯೇ?

ಅ) ಹೌದು ಆ) ಇಲ್ಲ

28) ಹೌದಾದಲ್ಲಿ ಯಾರು ನಡೆಸುತ್ತಾರೆ?

29) ಇಲ್ಲವಾದಲ್ಲಿ ಕಾರಣ ನೀಡಿರಿ.

30) ನಿಮ್ಮ ಗ್ರಾಮ/ನಗರದ ಶಾಲೆಗಳಲ್ಲಿ ಮಕ್ಕಳ ಹಕ್ಕುಗಳ ಪ್ರತಿನಿಧಿ 'ಮೀನಾ ಕ್ಲಬ್' ವ್ಯವಸ್ಥಿತವಾಗಿ ನಡೆಯುತ್ತಿವೆಯೇ?

ಅ) ಹೌದು ಆ) ಇಲ್ಲ

31) ಹೌದಾದಲ್ಲಿ ಯಾರು ನಡೆಸುತ್ತಾರೆ?

32) ಇಲ್ಲವಾದಲ್ಲಿ ಕಾರಣ ನೀಡಿರಿ.

33) ನಿಮ್ಮ ಗ್ರಾಮ/ನಗರದ ಶಾಲೆಗಳಲ್ಲಿ ಮಕ್ಕಳ ದೂರು/ಸಲಹಾ ಪೆಟ್ಟಿಗೆ ಇದ್ದು ನಿಯಮದಂತೆ ತೆರೆದು ನಿರ್ವಹಣೆ ಮಾಡಲಾಗುತ್ತಿದೆಯೇ?

ಅ) ಹೌದು ಆ) ಇಲ್ಲ

34) ಹೌದಾದಲ್ಲಿ ಯಾರು ಮತ್ತು ಎಷ್ಟು ಸಮಯಕ್ಕೊಮ್ಮೆ ಮಾಡಲಾಗುತ್ತದೆ?

35) ನಿಮ್ಮ ಗ್ರಾಮ/ನಗರದಲ್ಲಿ ಮಕ್ಕಳಿಗೆ ಅವರ ಹಕ್ಕುಗಳ ಬಗ್ಗೆ ತಿಳಿದಿದೆಯೇ?
ಅ) ಹೌದು ಆ) ಇಲ್ಲ

36) ನಿಮ್ಮ ಗ್ರಾಮ/ನಗರದ ಶಾಲೆಗಳಲ್ಲಿ ಮಕ್ಕಳ ಆರೋಗ್ಯ ಮೇಳಗಳು ನಡೆಯುತ್ತಿವೆಯೇ?
ಅ) ಹೌದು ಆ) ಇಲ್ಲ

37) ಇಲ್ಲವಾದರೆ ವಿವರಣೆ ನೀಡಿರಿ.

38) ನಿಮ್ಮ ಗ್ರಾಮ/ನಗರದ ಶಾಲೆಗಳಲ್ಲಿ ಪ್ರತಿಯೊಂದು ಮಗುವಿಗೆ 'ಆರೋಗ್ಯ ಚೀಟಿ' ನೀಡಲಾಗಿದೆಯೇ?
ಅ) ಹೌದು ಆ) ಇಲ್ಲ

39) ಇಲ್ಲವಾದರೆ ಕಾರಣ ತಿಳಿಸಿರಿ.

40) ನಿಮ್ಮ ಗ್ರಾಮ/ನಗರದ ಶಾಲೆಗಳ ಗ್ರಂಥಾಲಯದಲ್ಲಿ ಮಕ್ಕಳ ಹಕ್ಕುಗಳ ಸಾಹಿತ್ಯ ಇದೆಯೇ?
ಅ) ಹೌದು ಆ) ಇಲ್ಲ

41) ನಿಮ್ಮ ಗ್ರಾಮ/ನಗರದ ಶಾಲೆಗಳ ಗ್ರಂಥಾಲಯಗಳಲ್ಲಿ ವಿಧ್ಯಾರ್ಥಿಗಳ ಪುಸ್ತಕ ಹಂಚಿಕೆ ಮತ್ತು ಬಳಕೆಯ ಕುರಿತು ವಿವರ ನೀಡಿರಿ.

42) ನಿಮ್ಮ ಸಲಹೆ ಸೂಚನೆಗಳಿದ್ದಲ್ಲಿ ಇಲ್ಲಿ ನಮೂದಿಸಿ...

ಧನ್ಯವಾದಗಳು...

ದಿನಾಂಕ: ಮಾಹಿತಿದಾರರ ಸಹಿ.
ಸ್ಥಳ:

## ಮಕ್ಕಳ ಹಕ್ಕುಗಳು, ಸಮಸ್ಯೆಗಳು ಮತ್ತು ಅಭಿವೃದ್ಧಿ : ಉಡುಪಿ ಜಿಲ್ಲೆಯ ಒಂದು ಅಧ್ಯಯನ.

### *ಪ್ರಶ್ನಾವಳಿ 2*

(ಮಕ್ಕಳೊಂದಿಗೆ ಕೆಲಸ ಮಾಡುವ ಮೂಲದಿಂದ ತೆಗೆದುಕೊಂಡ ಮಾಹಿತಿದಾರರಿಗೆ)

***ಮಾನ್ಯರೇ,***

ನಾನು, ಪ್ರತಿಮ, ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಂಯೋಜನೆ ಹೊಂದಿದ, ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ, ಬಲ್ಮಠ, ಮಂಗಳೂರು ಇದರ ಎಂ.ಫಿಲ್ ವಿದ್ಯಾರ್ಥಿನಿಯಾಗಿದ್ದು, *"ಮಕ್ಕಳ ಹಕ್ಕುಗಳು, ಸಮಸ್ಯೆಗಳು ಮತ್ತು ಅಭಿವೃದ್ಧಿ : ಉಡುಪಿ ಜಿಲ್ಲೆಯ ಒಂದು ಅಧ್ಯಯನ"* ಎಂಬ ವಿಷಯದ ಕುರಿತು ಎಂ.ಫಿಲ್ ಪದವಿಗಾಗಿ ಸಂಶೋಧನಾ ಅಧ್ಯಯನ ನಡೆಸುತ್ತಿದ್ದೇನೆ. ಆದ್ದರಿಂದ ಈ ಪ್ರಶ್ನಾವಳಿಯನ್ನು ಉತ್ತರಿಸಿ ಮಾಹಿತಿಯನ್ನು ಒದಗಿಸಬೇಕೆಂದು ವಿನಂತಿಸಿಕೊಳ್ಳುತ್ತೇನೆ. ಹಾಗೆಯೇ ತಾವು ನೀಡಿದ ಮಾಹಿತಿಯನ್ನು ಗೌಪ್ಯವಾಗಿ ಇಡಲಾಗುವುದು ಮತ್ತು ಕೇವಲ ಶೈಕ್ಷಣಿಕ ಉದ್ದೇಶಕ್ಕಾಗಿ ಬಳಸಿಕೊಳ್ಳಲಾಗುವುದು. ಕೃತಜ್ಞತೆಗಳು.

1) ವೈಯಕ್ತಿಕ ವಿವರ :
ಹೆಸರು : ಲಿಂಗ: ವಯಸ್ಸು:
ಪದನಾಮ :
ಪೂರ್ಣ ವಿಳಾಸ :

ದೂರವಾಣಿ ಸಂಖ್ಯೆ :

2) ನಿಮ್ಮ ಗ್ರಾಮ/ನಗರವು ಬಾಲಕಾರ್ಮಿಕತೆಯಿಂದ ಮುಕ್ತವಾಗಿದೆಯೇ?
ಅ) ಹೌದು ಆ) ಇಲ್ಲ

3) ಹೌದಾದಲ್ಲಿ ಯಾವ ಸೂಕ್ತ ಕ್ರಮ ಅನುಸರಿಸಲಾಗುತ್ತಿದೆ?

4) ಇಲ್ಲವಾದರೆ ಕಾರಣವನ್ನು ತಿಳಿಸಿರಿ.

5) ಮಕ್ಕಳು ಬೇರೆ ಊರಿಗೆ ಬಾಲಕಾರ್ಮಿಕರಾಗಿ ಕೆಲಸಕ್ಕೆ ಹೋಗದಂತೆ ನೋಡಿಕೊಳ್ಳುತ್ತಿದ್ದೀರಾ?
ಅ) ಹೌದು ಆ) ಇಲ್ಲ

6) ಹೌದಾದಲ್ಲಿ ಯಾವ ಸೂಕ್ತ ಕ್ರಮ ಅನುಸರಿಸಲಾಗುತ್ತಿದೆ?

7) ಇಲ್ಲವಾದರೆ ಕಾರಣವನ್ನು ತಿಳಿಸಿರಿ.

8) ನಿಮ್ಮ ಗ್ರಾಮ/ನಗರದಲ್ಲಿ ಬಾಲಕಾರ್ಮಿಕ ಪದ್ಧತಿ ವಿರೋಧಿ ಆಂದೋಲನ ಸಮಿತಿಗಳು ಕಾರ್ಯನಿರ್ವಹಿಸುತ್ತಿವೆಯೇ?

ಅ) ಹೌದು ಆ) ಇಲ್ಲ

9) ನಿಮ್ಮ ಗ್ರಾಮ/ನಗರದಲ್ಲಿ ಈ ಮೇಲಿನ ಸಮಿತಿಗಳು ತಿಂಗಳಿಗೊಮ್ಮೆ ಸೇರಿ ತಮ್ಮ ಚಟುವಟಿಕೆ ಮಾಡುತ್ತಿವೆಯೇ?

ಅ) ಹೌದು ಆ) ಇಲ್ಲ

10) ನಿಮ್ಮ ಗ್ರಾಮ/ನಗರದಲ್ಲಿ ಮಕ್ಕಳ ಹಕ್ಕುಗಳ ರಕ್ಷಣಾ ಸಮಿತಿಗಳು ಸಮರ್ಪಕವಾಗಿ ಕಾರ್ಯನಿರ್ವಹಿಸುತ್ತಿವೆಯೇ? (ಆಯೋಗಗಳು ರಾಷ್ಟ್ರ ಮತ್ತು ರಾಜ್ಯ ಮಟ್ಟದಲ್ಲಿ ಒಂದೊಂದೇ ಇರುವುದು)

ಅ) ಹೌದು ಆ) ಇಲ್ಲ

11) ಇಲ್ಲವಾದರೆ ಎದುರಾಗುವ ಅಡೆತಡೆಗಳನ್ನು ವಿವರಿಸಿರಿ.

12) ನಿಮ್ಮ ಗ್ರಾಮ/ನಗರದಲ್ಲಿ ಸಮಗ್ರ ಮಕ್ಕಳ ರಕ್ಷಣಾ ಘಟಕ ಸಮರ್ಪಕವಾಗಿ ಕಾರ್ಯನಿರ್ವಹಿಸುತ್ತಿವೆಯೇ?

ಅ) ಹೌದು ಆ) ಇಲ್ಲ

13) ಇಲ್ಲವಾದರೆ ಕಾರಣವನ್ನು ತಿಳಿಸಿರಿ.

14) ನಿಮ್ಮ ಗ್ರಾಮ/ನಗರದಲ್ಲಿ ಮಕ್ಕಳ ಸಹಾಯವಾಣಿ (1098) ಜಾರಿಯಲ್ಲಿದೆಯೇ?

ಅ) ಹೌದು ಆ) ಇಲ್ಲ

15) ಇಲ್ಲದಿರಲು ಕಾರಣವನ್ನು ವಿವರಿಸಿ.

16) ನಿಮ್ಮ ಗ್ರಾಮ/ನಗರದಲ್ಲಿ ಮಹಿಳಾ ಮತ್ತು ಮಕ್ಕಳ ಇಲಾಖೆಯಿಂದ ದೊರಕುವ ಸವಲತ್ತುಗಳ ಮಾಹಿತಿ ಇದೆಯೇ? ಅವು ಸರಿಯಾಗಿ ವಿಲೇವಾರಿ ಆಗುತ್ತಿದೆಯೇ?

ಅ) ಹೌದು ಆ) ಇಲ್ಲ

17) ನಿಮ್ಮ ಗ್ರಾಮ/ನಗರದಲ್ಲಿ ಇರುವ ಆರೋಗ್ಯ ಸೌಕರ್ಯಗಳು ಮಕ್ಕಳಿಗೆ ಸಮರ್ಪಕವಾಗಿ ದೊರಕುತ್ತಿದೆಯೇ?

ಅ) ಹೌದು ಆ) ಇಲ್ಲ

18) ಇಲ್ಲವಾದರೆ ಕಾರಣವನ್ನು ತಿಳಿಸಿರಿ.

19) ನಿಮ್ಮ ಗ್ರಾಮ/ನಗರದಲ್ಲಿ ಮಕ್ಕಳ ಹಕ್ಕುಗಳ ವಿಶೇಷ ಗ್ರಾಮಸಭೆಗಳು ಸಮರ್ಪಕವಾಗಿ ನಡೆಯುತ್ತಿದೆಯೇ?

ಅ) ಹೌದು ಆ) ಇಲ್ಲ

20) ಹೌದಾದಲ್ಲಿ ಯಾರು ಮತ್ತು ಯಾವಾಗ ನಡೆಸುತ್ತಾರೆ?

21) ನಿಮ್ಮ ಗ್ರಾಮ/ನಗರದಲ್ಲಿ ಮಕ್ಕಳ ಹಕ್ಕುಗಳ ವಿಶೇಷ ಪೋಲೀಸ್ ಘಟಕ ಉತ್ತಮ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿವೆಯೇ?

ಅ) ಹೌದು ಆ) ಇಲ್ಲ

22) ಇಲ್ಲವಾದರೆ ಎದುರಾಗುವ ಅಡೆತಡೆಯನ್ನು ವಿವರಿಸಿರಿ.

23) ನಿಮ್ಮ ಗ್ರಾಮ/ನಗರದಲ್ಲಿ ಜನಪ್ರತಿನಿಧಿಗಳು ಮಕ್ಕಳ ಹಕ್ಕುಗಳ ಪರವಾಗಿ ಶ್ರಮಿಸುತ್ತಿದ್ದಾರೆಯೇ?

ಅ) ಹೌದು ಆ) ಇಲ್ಲ

24) ನಿಮ್ಮ ಗ್ರಾಮ/ನಗರದಲ್ಲಿ ಸುಮ್ಮ ಸುಮ್ಮನೆ ಮಕ್ಕಳನ್ನು ಬೀದಿ ಮೆರವಣಿಗೆಗಳಿಗೆ ಬಳಸುವುದನ್ನು ಗಮನಿಸಿದ್ದೀರಾ?

ಹೌದಾದಲ್ಲಿ ವಿರೋಧಿಸಿದ್ದೀರಾ?

ಅ) ಹೌದು ಆ) ಇಲ್ಲ

25) ನಿಮ್ಮ ಗ್ರಾಮ/ನಗರದಲ್ಲಿ ಯಾವುದೇ ಮಕ್ಕಳ ಸಾಗಾಣಿಕೆ ಆಗದಂತೆ ನಿಮ್ಮಲ್ಲಿ ಕ್ರಮ ಕೈಗೊಳ್ಳಲಾಗುತ್ತಿದೆಯೇ?

ಅ) ಹೌದು ಆ) ಇಲ್ಲ

26) ಹೌದಾದಲ್ಲಿ ಕೈಗೊಳ್ಳಲಾಗುತ್ತಿರುವ ಕ್ರಮ ಯಾವುದು?

27) ನಿಮ್ಮ ಗ್ರಾಮ/ನಗರದಲ್ಲಿ ಲಿಂಗ ಪತ್ತೆ ತಪಾಸಣೆ ಆಗದಂತೆ ಸರಕಾರದ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಲಾಗುತ್ತಿದೆಯೇ?

ಅ) ಹೌದು ಆ) ಇಲ್ಲ

28) ಯಾವ ನಿಯಮವನ್ನು ಹೇಗೆ ಪಾಲಿಸಲಾಗುತ್ತಿದೆ?

29) ನಿಮ್ಮ ಗ್ರಾಮ/ನಗರದಲ್ಲಿ ಚಿಂದಿ ಆಯುವ ಅಥವಾ ಬೀದಿ ಮಕ್ಕಳು ಇದ್ದಾರೆಯೇ?

ಅ) ಹೌದು ಆ) ಇಲ್ಲ

30) ನಿಮ್ಮ ಗ್ರಾಮ/ನಗರದಲ್ಲಿ ಮಕ್ಕಳ ಹಕ್ಕುಗಳ ಅರಿವಿದೆಯೇ?

ಅ) ಹೌದು ಆ) ಇಲ್ಲ

31) ಇಲ್ಲವಾದರೆ ಅರಿವನ್ನು ಹೇಗೆ ನೀಡುತ್ತೀರಿ?

32) ನಿಮ್ಮ ಗ್ರಾಮ/ನಗರದ ಮಕ್ಕಳಲ್ಲಿ ಕೀಳರಿಮೆ ಹುಟ್ಟಿಸುವಂತಹ ಸ್ಪರ್ಧೆಗಳನ್ನು ಮಾಡದೆ ಮಕ್ಕಳ ಪ್ರತಿಭೆಗಳನ್ನು ಪ್ರೋತ್ಸಾಹಿಸುವ ರೀತಿಯ ಕಾರ್ಯಕ್ರಮಗಳು ನಡೆಯುತ್ತಿದೆಯೇ?

ಅ) ಹೌದು ಆ) ಇಲ್ಲ

33) ನಿಮ್ಮ ಗ್ರಾಮ/ನಗರದಲ್ಲಿ ಮಕ್ಕಳಿಗೆ ಕ್ರಿಯಾತ್ಮಕ ಚಟುವಟುಕೆಗಳು/ ಶಿಬಿರಗಳು ನಡೆಯುತ್ತವೆಯೇ?

ಅ) ಹೌದು ಆ) ಇಲ್ಲ

34) ಹೌದಾದಲ್ಲಿ ಯಾರು ನಡೆಸುತ್ತಾರೆ?

35) ನಿಮ್ಮ ಗ್ರಾಮ/ನಗರದ ಮನೆಗಳಲ್ಲಿ ಹೆಣ್ಣು ಮತ್ತು ಗಂಡು ಮಕ್ಕಳಿಗೆ ಎಲ್ಲಾ ಚಟುವಟಿಕೆಗಳಲ್ಲಿ ಸಮಾನ ಅವಕಾಶ ನೀಡಲಾಗುತ್ತಿದೆಯೇ?

ಅ) ಹೌದು ಆ) ಇಲ್ಲ

36) ನಿಮ್ಮ ಗ್ರಾಮ/ನಗರದ ಮಕ್ಕಳ ಹಕ್ಕುಗಳ ಕುರಿತು ಕೆಲಸ ಮಾಡುವ ಸ್ವಯಂ ಸೇವಾ ಸಂಘಟನೆಗಳಿವೆಯೇ?

ಅ) ಹೌದು ಆ) ಇಲ್ಲ

37) ಹೌದದಾರೆ ವಿವರಣೆಯನ್ನು ನೀಡಿರಿ.

38) ನಿಮ್ಮ ಗ್ರಾಮ/ನಗರದ ಸಂಘ ಸಂಸ್ಥೆಗಳು, ಯುವಕ/ಯುವತಿ ಮಂಡಲಗಳು ಮಕ್ಕಳ ಹಕ್ಕುಗಳಿಗೆ ಪೂರಕವಾಗಿ ಕಾರ್ಯಕ್ರಮಗಳನ್ನು ಸಂಘಟಿಸುತ್ತಿದೆಯೇ?

ಅ) ಹೌದು ಆ) ಇಲ್ಲ

39) ಹೌದಾದರೆ ವಿವರಣೆಯನ್ನು ನೀಡಿರಿ.

40) ಇಲ್ಲವಾದರೆ ಕಾರಣಗಳನ್ನು ನೀಡಿರಿ.

41) ನಿಮ್ಮ ಗ್ರಾಮ/ನಗರದಲ್ಲಿ ವಿಶ್ವಸಂಸ್ಥೆಗೆ ಸಲ್ಲಿಸುವ ಮಕ್ಕಳ ಹಕ್ಕುಗಳ ಪರ್ಯಾಯ ವರದಿಯನ್ನು ಮಾಡಲಾಗಿದೆಯೇ?

ಅ) ಹೌದು ಆ) ಇಲ್ಲ

42) ಇಲ್ಲವಾದಲ್ಲಿ ಎದುರಾದ ಅಡೆತಡೆಗಳನ್ನು ತಿಳಿಸಿರಿ.

43) ನಿಮ್ಮ ಸಲಹೆ ಸೂಚನೆಗಳಿದ್ದಲ್ಲಿ ಇಲ್ಲಿ ನಮೂದಿಸಿ...

ಧನ್ಯವಾದಗಳು...

ದಿನಾಂಕ: ಮಾಹಿತಿದಾರರ ಸಹಿ.

ಸ್ಥಳ:

## ಪರಾಮರ್ಶನ ಗ್ರಂಥಗಳು


೧. ಕೋಣಿಲ ರಾಘವೇಂದ್ರ ಭಟ್ : "ಬಿಡುಗಡೆಯ ಕನಸಿನಲ್ಲಿ", ಬಾಲಕಾರ್ಮಿಕ ಪದ್ಧತಿ ವಿರೋಧಿ ಆಂದೋಲನ, ಕರ್ನಾಟಕ ೨೦೦೧.

೨. ಜಿಯೋ ಡಿ ಸಿಲ್ವಾ : "ಮಕ್ಕಳ ನ್ಯಾಯ ಕಾಯಿದೆ, ಏನು? ಏಕೆ?" ಪಡಿ ಮಂಗಳೂರು. ೨೦೦೯.

೩. ಲಿಯಾ ಲೆವಿನ್, ಅನುವಾದ ಕೆ.ಎಚ್.ಶ್ರೀನಿವಾಸ್ : "ಮಾನವ ಹಕ್ಕುಗಳು", ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ. ೨೦೦೦.

೪. ವಾಸುದೇವ ಶರ್ಮ : "ಕಲ್ಪನೆಯಿಂದ ಸಾಧ್ಯತೆಯೆಡೆಗೆ-ಮಕ್ಕಳ ಹಕ್ಕುಗಳು", ಚೈಲ್ಡ್ ರೈಟ್ ಟ್ರಸ್ಟ್, ಬೆಂಗಳೂರು.೨೦೦೮.

೫. ________ : "ಮಕ್ಕಳಗಾಗಿ ಮಕ್ಕಳ ಹಕ್ಕುಗಳು", ಚೈಲ್ಡ್ ರೈಟ್ ಟ್ರಸ್ಟ್, ಬೆಂಗಳೂರು ೨೦೧೧.

೬. ________ : "ಮಕ್ಕಳ ರಕ್ಷಕರು ನಾವು, ನೀವು ಮತ್ತು ಎಲ್ಲರೂ..",ಸಂವಹನ,ಬೆಂಗಳೂರು. ೨೦೦೫.

೭. ________ : "ಮಕ್ಕಳ ಹಕ್ಕುಗಳು ಚರ್ಚೆಗಾಗಿ ಲೇಖನಗಳು", ಸಂವಹನ ಪ್ರಕಾಶನ ಬೆಂಗಳೂರು. ೨೦೦೦.

೮. ________ : "ನಿಲ್ಲಿಸಿ-ಮಕ್ಕಳ ಸಾಗಾಣೆ ಮತ್ತು ಮಾರಾಟ", ಚೈಲ್ಡ್ ರೈಟ್ಸ್ ಟ್ರಸ್ಟ್, ಬೆಂಗಳೂರು. ೨೦೦೦.

೯. ಹಮೀದ್ ಮಂಜೇಶ್ವರ : "ಮಕ್ಕಳ ಹಕ್ಕಗಳು ಮತ್ತು ವಾಸ್ತವ ಬದುಕು" (ಅಪ್ರಕಟಿತ ಲೇಖನ ೨೦೦೧).

೧೦. ಮಕ್ಕಳ ಹಕ್ಕುಗಳು, ಭಿತ್ತಿಪತ್ರಗಳ ತರಬೇತಿ ಸಾಮಾಗ್ರಿ, ಕ್ರೈ, ಬೆಂಗಳೂರು.

೧೧. ಮಕ್ಕಳ ಹಕ್ಕುಗಳ ಒಡಂಬಡಿಕೆ ಜಾರಿ ಸೂಚಕಗಳು (ಕನ್ನಡ ಅನುವಾದ- ಕ್ರೈ), ಯುನಿಸೆಫ್ ೧೯೯೭.

೧೨. ಮಕ್ಕಳ ಹಕ್ಕುಗಳ ಒಡಂಬಡಿಕೆ(ಕನ್ನಡ) ಯುನಿಸೆಫ್ ಭಾರತ ಸರಕಾರ, ೧೯೯೪.

೧೩. ಮಕ್ಕಳಿಗಾಗಿ ಮಕ್ಕಳಿಗೋಸ್ಕರ, ಸಮಾಜ ವಿಕಾಸ ಕೇಂದ್ರ ಟ್ರಸ್ಟ್ ಮತ್ತು ಪರಸ್ಪರ, ೨೦೦೧.

೧೪. ಮಕ್ಕಳ ಹಕ್ಕುಗಳ ಜಾರಿಗಾಗಿ ಮಕ್ಕಳ ಗ್ರಾಮ ಸಭೆ, ಚೈಲ್ಡ್ ರೈಟ್ಸ್ ಟ್ರಸ್ಟ್, ಬೆಂಗಳೂರು.

೧೫. ಮಾನವ ಅಭಿವೃದ್ಧಿ ವರದಿ: ಕರ್ನಾಟಕ ಸರಕಾರ ೧೯೯೯.

೧೬. ಶಾಲೆಗಳಲ್ಲಿ ಮಕ್ಕಳ ಹಕ್ಕುಗಳ ಕೋಶ: ಒಂದು ಮಾಹಿತಿ ಪತ್ರ, ಪಡಿ-ವೆಲೊರೆಡ್ ಮಂಗಳೂರು.

೧೭. ಶಾಲೆ: ದ.ಕ ಹಾಗೂ ಉಡುಪಿ ಜಿಲ್ಲೆಗಳ ಶಿಕ್ಷಣ ಸಂಪನ್ಮೂಲ ಕೇಂದ್ರಗಳ ಸಾರಥ್ಯದಲ್ಲಿ ಪರಿಪಕ್ವ ಸಮಾಜಕ್ಕಾಗಿ ಶೈಕ್ಷಣಿಕ ಪತ್ರಿಕೆ.

೧೮. ಸಮಕ್ಷಮ : ಗುಣಾತ್ಮಕ ಶಾಲಾ ಶಿಕ್ಷಣದತ್ತ ಸಮುದಾಯ, ಸಾಹಿತ್ಯ ಮಾಲಿಕೆ, ಸರ್ವ ಶಿಕ್ಷಣ ಅಭಿಯಾನ ಕರ್ನಾಟಕ ಮತ್ತು ರಾಜ್ಯ ಶಿಕ್ಷಣ ಸಂಶೋಧನೆ ತರಬೇತಿ ಇಲಾಖೆ, ಬೆಂಗಳೂರು.

೧೯. ಸಂಕಲ್ಪ : ಎಸ್.ಡಿ.ಎಂ.ಸಿ. ಮತ್ತು ಸಿ.ಎ.ಸಿ. ಸದಸ್ಯರ ಸನಿವಾಸ ತರಬೇತಿ ವಿನ್ಯಾಸ, ೨೦೧೦-೧೧, ಸರ್ವಶಿಕ್ಷಣ ಅಭಿಯಾನ, ಕರ್ನಾಟಕ.

೨೦. ಸ್ಪಂದನ : ಗುಣಾತ್ಮಕ ಶಾಲಾ ಶಿಕ್ಷಣದತ್ತ ಸಮುದಾಯ, ಸಾಹಿತ್ಯ ಮಾಲಿಕೆ, ಸರ್ವ ಶಿಕ್ಷಣ ಅಭಿಯಾನ ಕರ್ನಾಟಕ ಮತ್ತು ರಾಜ್ಯ ಶಿಕ್ಷಣ ಸಂಶೋಧನೆ ತರಬೇತಿ ಇಲಾಖೆ, ಬೆಂಗಳೂರು.

**ಚೈಲ್ಡ್ ರೈಟ್ಸ್ ಟ್ರಸ್ಟ್‌ನ ಪ್ರಕಟಣೆಗಳು**

೨೧. ಮಕ್ಕಳ ಹಕ್ಕುಗಳ ಜಾರಿಗಾಗಿ ಮಕ್ಕಳ ಗ್ರಾಮಸಭೆ.

೨೨. ಮಕ್ಕಳ ಹಕ್ಕು – ಏಳು ಬೀಳು ಏಳು ಆಟ.

೨೩. ಮಕ್ಕಳ ಗ್ರಾಮಸಭೆಗಾಗಿ ಮಾಹಿತಿ ಭಿತ್ತಿಪತ್ರ.

೨೪. ಮಕ್ಕಳ ಹಕ್ಕು ತರಬೇತಿ ಕೈಪಿಡಿ.

೨೫. ಮಕ್ಕಳ ಹಕ್ಕಗಳನ್ನು ಅರ್ಥೈಸಿಕೊಳ್ಳಲು ಆಟಗಳು.

೨೬. ಮಕ್ಕಳ ಹಕ್ಕಗಳ ಜಾರಿಗಾಗಿ ಮಕ್ಕಳ ಗ್ರಮಸಭೆ ಹಾಗೂ ನಮ್ಮ ಮಕ್ಕಳು, ನಮ್ಮ ಪ್ರಗತಿ ಮಾಹಿತಿ ಸಂಗ್ರಹಣಾ ಮಾರ್ಗದರ್ಶನ ಕೈಪಿಡಿ.

೨೭. ಮಕ್ಕಳನ್ನು ಕುರಿತು ತರಬೇತಿ, ಕಾರ್ಯಾಗಾರಗಳು, ಸಮಾಲೋಚನೆ ಮತ್ತು ಹಕ್ಕು ಆಂದೋಲನಕ್ಕೆ ಬೇಕಾದ ಸಂವಹನ ಸಾಮಾಗ್ರಿಗಳು ಮತ್ತು ಮಾದರಿಗಳು.

೨೮. ಮಕ್ಕಳಿಗಾಗಿ ಮಕ್ಕಳ ಹಕ್ಕುಗಳು.

೨೯. ವಿಧಾನ ಸೌಧದಲ್ಲಿ ಮಕ್ಕಳಿದ್ದಾರೆಯೇ? (೨೦೦೫, ೦೬, ೦೭)

೩೦. ಶಿಕ್ಷಣಕ್ಕಾಗಿ ಮತ್ತು ಬಾಲಕಾರ್ಮಿಕ ಪದ್ಧತಿಯನ್ನು ತೊಲಗಿಸಲು ಬೀದಿ ನಾಟಕ ಸಂಗ್ರಹ (ಐ.ಎಲ್.ಓ. ಜೊತೆಗೂಡಿ ಪ್ರಕಟಣೆ).

1. D' Silva Geo: "*The voice of the voiceless children*", Prajna Counselling Centre,Mangalore.
2. A Practical Training Manual on Child Rights, (Based on ISCA and UNICEF Training package), MSS 1996.
3. Census of India, 2001.
4. Child Rights in India, Asha Bajpai, Oxford.
5. Comparative Study of the UN Convention on the Rights of the Child and Indian Laws, National Centre for Advocacy Studies, Pune, July 1996.
6. CRC Country Report, India, GOI, Feb, 1997/2001.
7. Facts about Rights of the Child, Vu Ngoc Binh, National Political Publicity House, Hanoi, Vietnam, 1996.
8. Juvenile Justice (Care and Protection) of Children Act 2006.
9. Karnataka Human Development Report, 1997/2005.
10. Meena, A series of Films by UNICEF on Child Rights.
11. Reports and Clippings.
12. Rights of the Child, UNICEF and Directorate of Women and Child
13. State of the World's Children (1997 to 2008) UNICEF.
14. The State Programme of Action for the Child, Govt. of Karnataka 1994.
15. The State Plan of Action to Eradicate Child Labour, GOK 2001.
16. The Right to be a Child, UNICEF, August 1994.
17. The Indian Child, CRY, 1999.
18. The Child and the Law, Gita Ramaswamy, UNICEF and AP Judicial Academy, Hyderabad 1996.
19. The Best Interest of Child, Innocent Studies, UNICEF 1996.News, Development, GOK, 1991.
20. The Child and the Law in India, ICCW, Chennai, 1998.
21. The Indian Child, A Profile 2002, Govt of India.